# ತೆರಹಿಲ್ಲದಭವ ನುಡಿಗೆಡೆಗೊಡನು

## ಶರಣೆ ಸತ್ಯಕ್ಕಳ ವಚನ-ತಾತ್ಪರ್ಯ

ಶ್ರೀ ವಿದ್ಯಾನಂದ ಶರಣರು ಡಬ್ಬೇರುಮಡುವು



# ತೆರಹಿಲ್ಲದಭವ ನುಡಿಗೆಡೆಗೊಡನು

## ಸತ್ಯಕ್ಕಳ ವಚನ - ತಾತ್ಪರ್ಯ


ಸಂಪಾದಕರು

**ದೇವಾನಂದ ಶರಣರು**

**ಬಸವರಾಜ ಸ್ವಾಮಿ**



ಪ್ರಕಾಶಕರು

**ಶ್ರೀ ಬಸವ ಸೇವಾ ಪ್ರತಿಷ್ಠಾನ**

ಸುದ್ದಿಮೂಲ ಕಾರ್ಯಾಲಯ, ಅಂಚೆಪೆಟ್ಟಿಗೆ 350

12-7-196, ಸಿಯಾತಲಾಬ, ರಾಯಚೂರು - 584102.

Terahilladabhava Nudigedegodanu
Satyakkala Vachana - Tatparya
by Sri Vidyananda Sharanaru Dabbermaduvu.
Edited by: Devananda Sharanaru Benakanahalli & Basavarajswamy, Raichur

ತೆರಹಿಲ್ಲದಭವ ನುಡಿಗೆಡೆಗೊಡನು
ಸತಕ್ಕಳ ವಚನ - ತಾತ್ಪರ್ಯ
ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡುವು
ಸಂಪಾದಕರು : ದೇವಾನಂದ ಶರಣರು, ಬಸವರಾಜಸ್ವಾಮಿ



ಮುದ್ರಣ : 2011 ಜುಲೈ
ಪ್ರತಿಗಳು : 1000
ಪುಟಗಳು : 55+10
ಬೆಲೆ : 100/- ರೂ.
ಕಾಗದ ಬಳಕೆ : ಮ್ಯಾಪಲಿತೋ 70 ಜಿಎಸ್ಎಂ
ಆಕಾರ : 1/8 ಡೆಮಿ
ಮುಖಪುಟ : ಪಿ.ಎ.ಬಿ.ಈಶ್ವರ, ರಾಯಚೂರು.

ಮುದ್ರಕರು : **ಮುಕ್ತಾ ಆಫ್‌ಸೆಟ್ ಪ್ರಿಂಟರ್ಸ್**
ಸಾಯಿ ಕಾಂಪ್ಲೆಕ್ಸ್, ಸುಭಾಶ ಚೌಕ್,
ಚಿತ್ತಾಪುರ ರಸ್ತೆ, ಯಾದಗಿರಿ.

ಪ್ರಕಾಶಕರು :
ಶ್ರೀ ಬಸವ ಸೇವಾ ಪ್ರತಿಷ್ಠಾನ
ಸುದ್ದಿಮೂಲ ಕಾರ್ಯಾಲಯ
ಸಿಯಾತಲಾಬ, ರಾಯಚೂರು - 584102
ದೂರವಾಣಿ ; 08532-235730, 236413

ಪುಸ್ತಕ ದೊರೆಯುವ ಸ್ಥಳ:
ಮಹಾಬೋಧಾಲಯ,
ಬೆನಕನಹಳ್ಳಿ,
ಅಂಚೆ: ಬಾಚಮಟ್ಟಿ
ತಾ.ಸುರಪುರ, ಜಿ. ಯಾದಗಿರಿ.

# ನುಡಿ ನಮನ

12ನೇ ಶತಮಾನದಲ್ಲಿ ಬಸವಣ್ಣನವರ ಕ್ಷೇತ್ರವಾದ ಬಸವಕಲ್ಯಾಣದಲ್ಲಿ ಏಳುನೂರಾ ಎಪ್ಪತ್ತು ಅಮರಗಣಂಗಳು ನಿರ್ವಾಣ ಹೊಂದಿ ಈ ನಾಡಿನ ಉದ್ದಗಲದಲ್ಲೂ ಕಾರ್ಯನಿರ್ವಹಿಸಿದರು. ಅವರು ರಚಿಸಿದ ವಚನಗಳು ಎಂದೆಂದೂ ಅಮರ. ಅಂತೆಯೇ ಶರಣರ ಆಶಯವನ್ನಿಟ್ಟು ಕೊಂಡು ಡಬ್ಬೇರುಮಡುವಿನ ಪರಮಪೂಜ್ಯ ಸದ್ಗುರುಗಳಾದ ಶ್ರೀ ವಿದ್ಯಾನಂದ ಶರಣರು ಕಳೆದ ಆರು ದಶಕಗಳವರೆಗೂ ಈ ನಾಡಿನಲ್ಲಿ ಏಕಾಂಗಿಯಾಗಿ ಕಾರ್ಯನಿರ್ವಹಿಸಿದರು.

ಬೀದರ ಜಿಲ್ಲೆ ಬಸವಕಲ್ಯಾಣ ತಾಲೂಕಿನ ಮುಚಳಂಬ ಗ್ರಾಮದ ಶ್ರೀ ನಾಗಭೂಷಣ ಶಿವಯೋಗಿಗಳಲ್ಲಿ ಶಿಷ್ಯತ್ವ ಪಡೆದರು. ಶರಣರು ಕನ್ನಡ ಕಲಿತದ್ದು ಅಯ್ಯನವರ ಶಾಲೆಯಲ್ಲಿ. ನಂತರ ಸಂಸ್ಕೃತ ಹಿಂದಿ ಕಲಿತರು.

ಜ್ಞಾನಿಗಳಿಗೆ ಹುಟ್ಟು ಸಾವುಗಳಿಲ್ಲ. ಪರಮಪೂಜ್ಯ ವಿದ್ಯಾನಂದ ಶರಣರನ್ನು ಲೌಕಿಕವಾಗಿ ಪರಿಚಯಿಸುವುದು ಸಾಧ್ಯವಾಗುವುದೇ ಇಲ್ಲ. ತಮಗೆ ತಿಳಿದಾಗಿನಿಂದ 60 ಸಂವತ್ಸರಗಳನ್ನು ಜ್ಞಾನಕ್ಕಾಗಿ ಮೀಸಲಿಟ್ಟವರು. ಯಾರೂ ಕೆಟ್ಟವರಲ್ಲ. ಒಳ್ಳೆಯದು ಕೆಟ್ಟದ್ದು ಎಂದು ಗುರುತಿಸುವುದು ಆವರಿಸಿಕೊಂಡ ಅಜ್ಞಾನದಿಂದ. ಒಳ್ಳೆಯದು ಒಳ್ಳೆಯದಲ್ಲ ಕೆಟ್ಟದ್ದು ಕೆಟ್ಟದ್ದಲ್ಲ. ಇವೆರಡೂ ಒಂದು ನಾಣ್ಯದ ಎರಡು ಮುಖಗಳು. ಈ ಎರಡೂ ಮುಖಗಳನ್ನು ತಿಳಿಯುವ ಅರಿವೇ ಸತ್ಯ. ಆ ಅರಿವೇ ಗುರು. ಆ ಗುರುವನ್ನು ಸರ್ವರಿಗೂ ಪರಿಚಯಿಸುವ ಕಾಯಕದಲ್ಲಿ 60 ಸಂವತ್ಸರಗಳ ಪರ್ಯಂತ ಮಗ್ನರಾದರು. ಅರುವಿನ ಹೃದಯ ಕಂಡರೆ ಗುರುಗಳಿಗೆ ಸಿಹಿ ಉಂಡಂತೆ. ಅವರನ್ನು ಹೃದಯದಿಂದ ಮಾತನಾಡಿಸಿ ಅವರ ಮನೆಗೆ ಹೋಗಿ 2-3 ದಿನಗಳವರೆಗೆ ವಚನಗಳ ಮೂಲಕ ಜ್ಞಾನ ಹೇಳಿ ಶರಣರ ಆಶಯದಂತೆ ಸುಖದಿಂದ ಜೀವಿಸಲು ಬಯಸುತ್ತಿದ್ದರು.

ಅಭಿವೃದ್ಧಿ ಎಂದರೆ ಕಲ್ಲು ಮಣ್ಣು ಕಟ್ಟಿಗೆ ಕಟ್ಟಡ ಕರೆನ್ಸಿ ಲೋಹಗಳಲ್ಲ. ತಾನು ಅಭಿವೃದ್ಧಿ ಹೊಂದುವುದು. ತನಗೆ ಅರಿವಾಗುವುದು. ತಾನು ತನ್ನಲ್ಲಿಯೇ ಸತ್ಯವನ್ನು ಕಂಡುಕೊಳ್ಳುವುದು.

ಅದು ಕಲ್ಲು ಮಣ್ಣು ಹೊಡೆದು ಚಿನ್ನ ತೆಗೆದಷ್ಟೆ ಕಠಿಣ. ಸರಕಾರ, ವಿಶ್ವವಿದ್ಯಾಲಯಗಳು, ಸಮಾಜ, ಕುಟುಂಬ ವರ್ಗಗಳು ಸಾಧ್ಯವಾದರೆ ಈ ಕ್ರಿಯೆಯಲ್ಲಿ ತೊಡಗಬೇಕಷ್ಟೆ. ಇದಕ್ಕೂ ಮಿಗಿಲಾಗಿ ತಾನು ತನ್ನ ಕೆಲಸದಲ್ಲಿ ತೊಡಗಬೇಕಷ್ಟೆ.

ತನಗೆ ಅರಿವುಂಟಾಗುವುದು ಎಂದರೆ ಒಂದು ಧಾರ್ಮಿಕ ಕೆಲಸವಲ್ಲ. ಧರ್ಮ ಜಾತಿ ಮತ ಪಂಥ ಇಂದಿನ ಆಧುನಿಕ ಮಠ ಮಂದಿರಗಳಿಂದ ಅದು ದೊರೆಯುವುದೂ ಇಲ್ಲ. ಬದಲಾಗಿ ಅರಿವಿನ ಕ್ರಿಯೆ ಇನ್ನೂ ತನ್ನಿಂದ ಬಹು ದೂರ ಸಾಗುವುದು.

ಅರಿವು ಶಾಲಾ ಕಾಲೇಜು ವಿಶ್ವವಿದ್ಯಾಲಯಗಳಿಂದ ದೊರೆಯುವುದಿಲ್ಲ. ಪುಸ್ತಕಗಳಿಂದಲೂ ದೊರೆಯುವುದಿಲ್ಲ. ಆಧುನಿಕ ವಿಜ್ಞಾನ ಅರಿವಲ್ಲ, ಮಾಹಿತಿಯ ಒಂದು ಚಿಕ್ಕ ಕ್ರಿಯೆ ಮಾತ್ರ. ಅರಿವು ಬ್ರಹ್ಮಜ್ಞಾನ. ವಿಜ್ಞಾನ ಅರಿವಿನ ಬೈಪ್ರೊಡಕ್ಟ್. ಅದು ಭ್ರಮೆ ಜ್ಞಾನ. ಭ್ರಮಾಜ್ಞಾನಕ್ಕೆ

ಮರುಳಾದದ್ದೇ ಹೆಚ್ಚು. ಇದನ್ನು ಯಾರೋ ಹೇಳಿದರೆ ತಿಳಿಯುತ್ತದೆಯೆಂದಲ್ಲ. ಅರಿವಾದರೆ ತನಗೆ ತಾನೇ ತಿಳಿಯುತ್ತದೆ, ತಾನು ಕಲಿತದ್ದೆಲ್ಲ ಭ್ರಮಾಜ್ಞಾನವೆಂದು ! ಆಗ ಕಲಿತದ್ದೆಲ್ಲ ಮರೆಯುತ್ತಾನೆ. ಪ್ಲಾಸ್ಟಿಕ್ ಹಾಳೆ ಮೇಲೆ ಬರೆದು ಬೇರ್ಪಡಿಸಿದರೆ ಬರೆದದ್ದೆಲ್ಲ ನಶಿಸಿಹೋಗುವಂತೆ ಅಷ್ಟು ತೀಕ್ಷ್ಣವಾಗಿ ಮರೆಯುವ ಕ್ರಿಯೆ ತನ್ನಲ್ಲಿ ನಡೆಯುತ್ತದೆ. ಇನ್ನು ಉಳಿದದ್ದು ಅರಿವು ಮಾತ್ರ. ಅದು ಸವಿದಷ್ಟೂ ಸಿಹಿ ; ಗಂಧದ ಕೊರಡು ಉಜ್ಜಿದಷ್ಟೂ ವಾಸನೆಯಿದ್ದಂತೆ.

ಇಂತಹ ಒಂದು ಸುಖ ಸರ್ವ ತನುಗಳಲ್ಲಿಯೂ ಇದೆ ; ಸರ್ವರಲ್ಲಿಯೂ ಇದೆ. ಅದು ದಕ್ಕಬೇಕೆಂಬುದೇ ವಿದ್ಯಾನಂದ ಶರಣರ ಆಶಯವಾಗಿತ್ತು.

ಶ್ರೀ ವಿದ್ಯಾನಂದ ಶರಣರಿಗೆ ಹಸಿವಿತ್ತು. ಡಬ್ಬೇರು ಮಡುವಿನಿಂದ ಲಿಂಗಸೂಗೂರಿಗೆ ನಡೆದು ರಾಯಚೂರು-ಗುಲ್ಬರ್ಗಾಕ್ಕೆ ಬಸ್ ರೈಲು ಹಿಡಿದು ಅಲ್ಲಿಂದ 120 ಕಿ.ಮೀ. ದೂರದ ಮುಚಳಂಬಕ್ಕೆ ಕಾಲ್ನಡಿಗೆಯಿಂದ ಪ್ರಯಾಣ. ಅರಿವಿನ ಸುಖದ ಬೆನ್ನು ಹತ್ತಿದವರಿಗೆ ಇದೆಲ್ಲವೂ ಗೌಣ. ಆ ಸುಖದ ರುಚಿಯೇ ಹಾಗಿರುತ್ತದೆ. ಅದಕ್ಕಾಗಿಯೇ ಬುದ್ಧ ಮಹಾವೀರ ನಿಜಗುಣರು ಅರಸೊತ್ತಿಗೆಯನ್ನು ಕಡೆಗಣಿಸಿ ಅರಿವಿನ ಸುಖ ಅನುಭವಿಸಿದರು. ಸಕಲರೂ ಈ ಸುಖ ಅನುಭವಿಸಲು ಸರಳ ಸೂತ್ರ ರಚಿಸಿದರು.

ಶ್ರೀ ನಾಗಭೂಷಣ ಶಿವಯೋಗಿಗಳು ಆಗರ್ಭ ಶ್ರೀಮಂತರು. ಬಾಲ್ಯದಲ್ಲಿಯೇ ಮದುವೆಯಾಗಿತ್ತು. ನಡೆಯಲು ತವರಿನವರು ಗಂಡನ ಮನೆಗೆ ಕರೆತಂದರು. ಮನೆಯಲ್ಲಿದ್ದ ಒಡವೆಯೆಲ್ಲ ಹಾಕಲು ಕೊಟ್ಟರು. ಈ ಒಡವೆಯೆಲ್ಲಾ ಅವರಿಗೆ ಸಲ್ಲಬೇಕು. ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಿ ಎಂದು ಪತ್ರ ಬರೆದು ಹೊರ ನಡೆದರು.

ತಟ್ಟೆಯಲ್ಲಿದ್ದ ಊಟ ಶಿವಯೋಗಿಗಳಿಗೆ ರುಚಿಸಲಿಲ್ಲ. ಹನ್ನೆರಡು ವರ್ಷಗಳ ಪರ್ಯಂತ ಅರಿವಿನ ಊಟಕ್ಕಾಗಿ ಹುಡುಕಿದರು. ಹುಬ್ಬಳ್ಳಿಯ ಸಿದ್ಧಾರೂಢರು ಉಣಬಡಿಸಿದರು. ಅರಿವಿನ ಊಟ ತಾಯಿಯ ಎದೆಹಾಲಿಗಿಂತಲೂ ರುಚಿಕರ.

ಕಲ್ಯಾಣದ ಬಸವಣ್ಣನ ವಿಶ್ವವಿದ್ಯಾಲಯದಲ್ಲಿ 1 ಲಕ್ಷ 96 ಸಾವಿರ ಜನ ಈ ದಾಸೋಹದ ರುಚಿಯ ಸವಿದರು. ಆದರೆ ಉಂಡದ್ದು 770 ಜನ ಮಾತ್ರ. ಅರಿವನೇ ಉಂಡರು ಅರಿವನೇ ಢೇಗಿದರು.

254 ಜನ ಅರಿವಿನ ಶಿಕ್ಷಣದಲ್ಲಿ ತಮ್ಮನ್ನು ಅನವರತ ತೊಡಗಿಸಿಕೊಂಡಾಗ ಒಬ್ಬರಿಗೆ ಮಾತ್ರ ಜ್ಞಾನ ಲಭ್ಯವಾದದ್ದು ಕಲ್ಯಾಣದಲ್ಲಿ ಕಂಡುಬರುತ್ತದೆ. ಇದು ಜಗತ್ಪ್ರಸಿದ್ಧ. ಕೋಟಿಗೊಬ್ಬ ಶರಣ ಲಕ್ಷಕ್ಕೊಬ್ಬ ಭಕ್ತ ಎಂಬುದನ್ನು ತಮ್ಮ ಸರಳ ಮತ್ತು ನಿರಂತರ ಶಿಕ್ಷಣದಿಂದ ಸುಳ್ಳಾಗಿಸಿದರು.

ಅರಿವಿನ ಶಿಕ್ಷಣ ತನ್ನದೇ ಆದರೂ ಅದೆಷ್ಟು ಜಟಿಲವೆಂದು ಭಾಸವಾಗದೇ ಇರದು. ತಿಳಿದರೆ ಅದೆಷ್ಟು ಸರಳವೆಂದೂ ಭಾಸವಾಗದೆ ಇರದು. ಆದರೆ ತಿಳಿಯುವ ಹಸಿವಾಗಬೇಕು; ಉತ್ಕಟೇಚ್ಛೆಯಾಗಬೇಕು. ಮಹಾವೀರ ಬುದ್ಧರಂತೆ ಮೋಳಿಗೆ ಮಾರಯ್ಯ, ಮರುಳ ಶಂಕರರಂತೆ; ನಾಗಭೂಷಣ ಶಿವಯೋಗಿ ವಿದ್ಯಾನಂದ ಶರಣರಂತೆ.

ನಲವತ್ತೈದು ವರ್ಷಗಳ ಹಿಂದೆ ನಾಗಭೂಷಣರು ವಿದ್ಯಾನಂದ ಶರಣರನ್ನು ಕರೆದು

ಅರಿವಿನ ದಾಸೋಹ ಕಾಯಕದಲ್ಲಿ 12 ವರ್ಷಗಳಾದರೂ ಸೇವೆ ಮಾಡಬೇಕು ಎಂದು ಕೇಳಿಕೊಂಡರು. ವಿದ್ಯಾನಂದ ಶರಣರು ಹಿಂದೆ ನೋಡಲಿಲ್ಲ. ನಾಲ್ಕು ದಶಕಗಳ ಪರ್ಯಂತ ಈ ನಾಡಿನಾದ್ಯಂತ ಏಕಾಂಗಿಯಾಗಿ ಮನೆಮನೆಗೆ ಸಂಚರಿಸಿದರು. ಆಶ್ರಮ ಮಠಗಳನ್ನು ಕಟ್ಟಲಿಲ್ಲ. ಘಟ ಕಟ್ಟಿದರು. ಅರುಹ್ಯಯದಕ್ಕೆ ಅರಿವಿನ ಸೂತ್ರ ಹೇಳಿಕೊಟ್ಟರು. ಅರಿವಿನಲ್ಲಿಯೇ ನಿಂತು ಸುಖಿಗಳಾಗುವ ಬಗೆ ವಿವರಿಸಿದರು.

ಸಾವಿರಾರು ಶಿಷ್ಯರನ್ನು ಮಾಡಿದರು. ಶಿಷ್ಯನ ಶಿಷ್ಯತ್ವಗುರುವಿನ ಗುರುತನ ಕೆಡೆಸಿ ಅರಿವಿನ ಆನಂದದಲ್ಲಿ ಉಳಿಯುವ ಬಗೆಯನ್ನು ಕೈ ಮುಟ್ಟಿ ತೋರಿಸಿದರು. ಅವರೆಲ್ಲ ಸಿದ್ಧರಾದರೆ ಈ ನಾಡಿನಲ್ಲಿ ಬೆಳಕೇ ಬೆಳಕು.

ನಾಗಭೂಷಣ ಶಿವಯೋಗಿಗಳು ಭಗವದ್ಗೀತೆ ಮೂಲಕ ಹೇಳಿದರೆ ವಿದ್ಯಾನಂದ ಶರಣರು ಶರಣರ ವಚನಗಳನ್ನು ತೆಗೆದುಕೊಂಡರು. ಒಂದೊಂದು ವಚನವೂ ಭಗವದ್ಗೀತೆ. ಅರಿವಿಗೆ ಹೋಗುವ ಸರಳ ಮಾರ್ಗ. ಒಂದು ವಚನಕ್ಕೆ ಮತ್ತೊಂದು ವಚನ ದೃಷ್ಠಾಂತ ಕೊಟ್ಟು ಮಾನವ ಕುಲದ ಮೇಲೆ ಶರಣರಿಗಿದ್ದ ಕಳಕಳಿಯನ್ನು ವಿವರಿಸಿದರು.

ಶರಣರ ವಚನಗಳನ್ನು ಅರಿವಿಗೆ ಹೋಗುವ ಪ್ರಾಯೋಗಿಕ ಸೂತ್ರಗಳ ರೂಪದಲ್ಲಿ ಹೊಸ ಆಯಾಮ ಕಂಡುಹಿಡಿದ ಶ್ರೇಯಸ್ಸು ಪರಮ ಪೂಜ್ಯ ಸದ್ಗುರುಗಳಾದ ಶ್ರೀ ವಿದ್ಯಾನಂದ ಶರಣರಿಗೆ ಸಲ್ಲಬೇಕು. ಹಗಲು ವಚನಗಳ ಮೂಲಕ ಮೈಮುಟ್ಟಿ ಪ್ರಾಯೋಗಿಕವಾಗಿ ಅರಿವಿಗೆ ಹೋಗುವ ವಿಧಾನವನ್ನು ಶಿಷ್ಯರಿಗೆ ಹೇಳಿದರೆ, ರಾತ್ರಿ ಶರಣರ ವಚನಗಳಿಗೆ ವ್ಯಾಖ್ಯಾನ ಬರೆಯುತ್ತಿದ್ದರು. ಹಾಗೆ ಬರೆದ ವ್ಯಾಖ್ಯಾನಗಳೇ ಸುಮಾರು ಐದು ಸಾವಿರ ಪುಟಗಳಷ್ಟಾಗಬಹುದು.

ಅರಿವಿಗೆ ಹೋಗುವ ಹೊಸ ಸುಳುಹು ಹೊಳೆದರೆ ಪಕ್ಕದಲ್ಲಿ ಮಲಗಿದವರನ್ನು ಮೈದಡವಿ ನೋಡು ಶರಣರು ಹೇಗೆ ಹೇಳಿದ್ದಾರೆ ಎಂದು ಹೇಳುವ ಮಾತೃ ಹೃದಯ ಅವರದು.

ಹೀಗೆ ಮನೆ ಮನೆಗೆ ಹೋಗಿ ಹೃದಯದ ಜೊತೆಗೆ ಮಾತನಾಡಿಸುವ ಅವರ ಕಾಯಕದಲ್ಲಿ ಸಿಕ್ಕವನೇ ನಾನು. ಶರಣರು ನನ್ನೊಂದಿಗೂ, ದೇವಾನಂದರೊಂದಿಗೂ ಐಕ್ಯದ ಕೊನೆಯ ದಿನಗಳವರೆಗೂ ಕಳೆದರು(2006 ಜುಲೈ 2). ಅವರೊಂದಿಗೆ ಉಂಡ ಅರಿವಿನ ಊಟವದು ಅಮೃತ. ಅದು ನಮ್ಮ ಸೌಭಾಗ್ಯ.

ಪರಮಪೂಜ್ಯ ಗುರುಗಳಂತೆ ಪೂರ್ಣ ಪ್ರಮಾಣದಲ್ಲಿ ಅರಿವಿನ ಕಾಯಕ ಮುಂದುವರಿಸಿಕೊಂಡು ಹೋಗುತ್ತಿರುವ ಶ್ರೀ ದೇವಾನಂದ ಶರಣರದು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಬೆನಕನಹಳ್ಳಿ ಗ್ರಾಮ. ಅದು ಪೂಜ್ಯ ಗುರುಗಳ ಐಕ್ಯಸ್ಥಾನ. ಶರಣರ ಕಾಯಕ ಅರಿವಿನ ಕಾಯಕ. ಸರಕಾರಕ್ಕೂ ಸಮಾಜಕ್ಕೂ ಶ್ರೀಮಂತನಿಗೂ ನೀಗದ ಕಾಯಕ. ಜ್ಞಾನಕ್ಕೆ ಶರಣು ಹೋಗುವ ಕಾಯಕ. ಅರಿವಿಗೆ ದಾಸನಾಗುವ ಕಾಯಕ, ಜ್ಞಾನದ ಹಸಿವಾದವನಿಗೆ ದೊರೆಯುವ ಪ್ರಸಾದ. ಅದು ತನ್ನ ಅನ್ನ ತನಗೆ ಬಡಿಸಿ ಹೊರನಿಲ್ಲುವ ಗುರುವಿನ ಪ್ರಸಾದದ ಕಾಯಕ. ಈ ಕಾಯಕದಲ್ಲಿ ದೇವಾನಂದ ಶರಣರು ಸದಾನಿರತ.

ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್‌ರಾದ ದೇವೇಂದ್ರಪ್ಪನವರು ಪಕ್ಕದ ಹಳ್ಳಿಯ ದೇವತಗಲ್‌ನವರು. ಪೂಜ್ಯ ಗುರುಗಳು ಆ ಹಳ್ಳಿಗೆ ಹೋದಾಗ ದೊರೆತವರು. ಅಂದಿನಿಂದ

ಕೆಲಸಕ್ಕೆ ಗುಡ್‌ಬೈ ಹೇಳಿ ಅರಿವಿನ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡವರು.

ಶರಣರ ದಾಸರ ವಿಷಯದಲ್ಲಿ ಡಾಕ್ಟರೇಟ್ ಮಾಡಿದವರು, ಮಾಡುವವರು ಅವರ ವಿಷಯದಲ್ಲಿ ಉಪನ್ಯಾಸ ನೀಡುವವರು, ತಮ್ಮನ್ನು ತಾವು ಕಂಡುಕೊಳ್ಳುವ ವಿಚಾರದಲ್ಲಿ ತೊಡಗಿದವರು, ದೇವಾನಂದರನ್ನು ಭೇಟಿಯಾಗಲೇ ಬೇಕು. ಸರಕಾರ, ವಿಶ್ವವಿದ್ಯಾಲಯಗಳು ರಚಿಸುವ ಅಧ್ಯಯನ ಪೀಠಗಳು ಇತ್ತ ಮುಖ ಮಾಡಲೇ ಬೇಕಾಗಿದೆ.

* * * *

## ಓದುವ ಮೊದಲು ....

ಅಂತರಂಗದ ಜ್ಞಾನ ಅನ್ಯ ನುಡಿಗಳಿಗೆ ಅವಕಾಶ ಮಾಡಿಕೊಡದಂತೆ ಪ್ರತಿ ತನುವಿನ ಕಣ ಕಣದಲ್ಲಿ ಬೆರೆತಿದೆ. ಅಂತಹ ಜ್ಞಾನ ಪುನಃ ತನುವಿಗೆ ಪರಿಚಯಿಸುವ ಕಾಯಕದಲ್ಲಿ ನಿರತರಾದ ಶರಣರ ಅಡಿಗಳಿಗೆ ಶರಣೆಂಬೆ ನಿಮ್ಮ ಶರಣರಡಿಗೆರಗಿ ಶರಣೆಂಬೆ - ಎನ್ನುವ ಸಾಲಿನಿಂದ ಜ್ಞಾನ ನಿಧಿ ಶಿವಶರಣೆ ಸತ್ಯಕ್ಕಳ ವಚನಗಳು ಪ್ರಾರಂಭವಾಗುತ್ತವೆ. ಪರಮಪೂಜ್ಯಗುರುಗಳಾದ ಶ್ರೀ ವಿದ್ಯಾನಂದ ಶರಣರು ಅವರ ಇಪ್ಪತ್ಮೂರು ವಚನಗಳನ್ನು ಆಯ್ದುಕೊಂಡು ತಾತ್ಪರ್ಯ ಬರೆದಿದ್ದಾರೆ. ಈ ಸಂಕಲನಕ್ಕೆ ''ತೆರಹಿಲ್ಲದಭವ ನುಡಿಗೆಡೆಗೊಡನು'' ಎಂದು ತಾಯಿ ಸತ್ಯಕ್ಕ ಅವರ ಸಾಲನ್ನೆ ನಾಮಕರಣ ಮಾಡಿದ್ದಾರೆ.

ಭವ ರೋಗಕ್ಕೆ ಗುರಿಯಾದ ಮನುಷ್ಯನಿಗೆ ಅಭವನ ದರ್ಶನವಾಗಲೇಬೇಕು. ಆ ಅಭವನ ದರ್ಶನ ಭಾಗ್ಯಕ್ಕಾಗಿ ಇಡೀ ಪ್ರಪಂಚದಾದ್ಯಂತ ಮನುಜರು ಪ್ರಯತ್ನಿಸುತ್ತಲೇ ಬಂದಿದ್ದಾರೆ. ಅಭವನ ದರ್ಶನದ ಭಾಗ್ಯ ತನುವಿಗೆ ಆಗದೇ ಇಹಲೋಕದ ಯಾತ್ರೆ ಮುಗಿದೇ ಎಷ್ಟೋ ಹೋಗುತ್ತದೆ.

ಅಭವನ ದರ್ಶನಕ್ಕಾಗಿ ತನುವು ದೇವಸ್ಥಾನ, ಪುಣ್ಯ ಕ್ಷೇತ್ರ , ಜ್ಯೋತಿರ್ಲಿಂಗ ಮುಂತಾದೆಡೆ ಸುತ್ತುತ್ತದೆ. ತನುವಿಗಂಟಿದ ಭವ ರೋಗ ಹೋಗುವುದೇ ಇಲ್ಲ. ಏಕೆಂದರೆ ತನುವಿನ ಭವ ರೋಗ ಕಳೆಯುವ ಅಭವ ತನುವಿನ ಕಣಕಣದಲ್ಲಿ ನುಡಿಗೆ ಎಡೆಗೊಡದಂತೆ ವಾಸವಾಗಿದ್ದಾನೆ. ಆ ಅಭವನ ಪರಿಚಯವಾದರೆ ಸಾಕು ತನುವು ಭವ ರೋಗದಿಂದ ಮುಕ್ತ !

ತನುವನ್ನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರದೆಡೆಗೆ ಕರೆದುಕೊಂಡು ಹೋಗುವುದೇ ಮನ. ಮನಕ್ಕೆ ಕಾಮದ ಬಯಕೆಯಾಗಿ ತನುವಿನೊಂದಿಗೆ ಸುಖಿಸುತ್ತದೆ. ತನುವಿಗೆ ಹಾದರದ ಪಟ್ಟಕಟ್ಟಿ ಮನ ತನುವಿನಲ್ಲಿ ಸುರಕ್ಷಿತವಾಗಿ ಉಳಿಯುತ್ತದೆ. ಜನ ಮನವನ್ನು ಗುರುತಿಸುವುದಿಲ್ಲ. ತಪ್ಪು ಮಾಡಿದ್ದು ತನುವೇ ಎಂದು ತಿಳಿದು ದಂಡಿಸುತ್ತಾರೆ. ಅಪಮಾನ ಸಹಿಸದ ಮನ ಪುನಃ ಪ್ರತ್ಯಕ್ಷವಾಗಿ ತನುವನ್ನು ಆತ್ಮಹತ್ಯೆಗೆ ಕರೆದೊಯ್ಯುತ್ತದೆ.

**ಇಲ್ಲಿ ತಿಳಿಯಬೇಕಾದುದು ಇಷ್ಟೇ :**

ತನುವಿನೊಂದಿಗೆ ಸುಖಿಸಿದ್ದು ಮನವೇ. ತನುವನ್ನು ಆತ್ಮಹತ್ಯೆಗೆ ಎಳಿಸಿದ್ದು ಮನವೇ. ಈ

ಮನವೇ ತನುವಿನ ಭವರೋಗದ ರಕ್ಕಸ ! 'ಕೋತಿ ಮೊಸರನ್ನು ತಿಂದು ಮೇಕೆ ಮೂತಿಗೆ ಸವರಿತು' ಎಂದು ಜನಪದರು ಹೇಳಿದ್ದು ಕೂಡಾ ಈ ಮನಕ್ಕೇ. ಇಲ್ಲಿ ಮನ ಕೋತಿ; ತನು ಮೇಕೆ. ಮನದ ಅಕೃತ್ಯಕ್ಕೆ ತನು ಬಲಿಯಾಗಬೇಕೆ ? ಇದು ಪ್ರಶ್ನೆ.

ಹೀಗೆ ಸಂಕಟಪಡುವ ತನುವನ್ನು ಸಮಾಧಾನಪಡಿಸಲು ಮನ ಪುಣ್ಯ ಕ್ಷೇತ್ರಗಳಿಗೆ, ದೇವಸ್ಥಾನಗಳ ದರ್ಶನಕ್ಕೆ ಕರೆದೊಯ್ಯುತ್ತದೆ. ಚಂದಾ ಕೊಟ್ಟು ದೇವಸ್ಥಾನ ನಿರ್ಮಿಸಿದ್ದು ತಾನೆ. ಹಣೆ ಹಚ್ಚಿ ಅಡ್ಡ ಬಿದ್ದು ಬೇಡಿಕೊಳ್ಳುವುದು ತಾನೇ. ಸರದಿಯಲ್ಲಿ ನಿಂತು ದರ್ಶನವಾಯಿತೆಂದು ಸಮಾಧಾನ ಪಡುವುದು ತಾನೇ. ಎಲ್ಲ ಹುಚ್ಚರ ಕೆಲಸ ; ಆದರೂ ಅರುವಿಗೆ ಬರದೆ ನಿರಂತರ ಆಚರಣೆ.

ಹೀಗೆ ತನುವಿಗೆ ಅಂಟಿದ ಭವರೋಗವನ್ನು ಕಳೆಯುವ ಶಕ್ತಿ ಅಭವನಿಗೆ ಮಾತ್ರ ಇದೆ. ತನುವೇ ಅಭವನ ವಾಸಸ್ಥಾನ ! ಆತನ ಸ್ವಂತ ಮನೆಯೂ ಹೌದು; ಮನೆಯ ಮಾಲೀಕನೂ ಹೌದು. ಆದರೆ ಭವರೋಗವೆಂಬ ಮನ ತನುವನ್ನು ಆವರಿಸಿಕೊಂಡಿದೆ. ತನುವನ್ನು ಬಾಡಿಗೆಗೆ ಪಡೆದು ಅದು ತನ್ನ ಸ್ವಂತ ಮನೆಯಂತೆ ತನುವನ್ನೇ ದುರ್ಬಳಕೆ ಮಾಡಿಕೊಳ್ಳುತ್ತದೆ.

ಕಣ್ಣಿನಲ್ಲಿ ಭವರೋಗವೆಂಬ ರಕ್ಕಸ ಆವರಿಸಿಕೊಂಡಿದ್ದರೆ ಕಣ್ಣಿನ ಕಣ್ಣಿನಲ್ಲಿ ಅಭವನ ವಾಸ. ಕಿವಿಯಲ್ಲಿ ಭವರೋಗವೆಂಬ ರಕ್ಕಸನಿದ್ದರೆ ಕಿವಿಯ ಕಿವಿಯಲ್ಲಿ ಅಭವನ ವಾಸ. ಮೂಗಿನಲ್ಲಿ ಭವರೋಗವೆಂಬ ರಕ್ಕಸ ಆವರಿಸಿಕೊಂಡಿದ್ದರೆ ಮೂಗಿನ ಮೂಗಿನಲ್ಲಿ ಅಭವನ ವಾಸ. ನಾಲಿಗೆಯಲ್ಲಿ ಭವರೋಗವೆಂಬ ರಕ್ಕಸ ವಾಸವಾಗಿದ್ದರೆ ನಾಲಿಗೆಯ ನಾಲಿಗೆಯಲ್ಲಿ ಅಭವನ ವಾಸ. ಚರ್ಮದಲ್ಲಿ ಭವರೋಗವೆಂಬ ರಕ್ಕಸ ಆವರಿಸಿಕೊಂಡಿದ್ದರೆ ನಾಲಿಗೆಯ ನಾಲಿಗೆಯಲ್ಲಿ ಅಭವನ ವಾಸ !

ಅಭವನ ನುಡಿ ನುಡಿಗೆಡೆಗೊಡದ ನುಡಿ. ಲೋಕದ ನುಡಿ ಸುಖ ದುಃಖಗಳಿಂದ ಕೂಡಿದ ನುಡಿ. ಲೋಕದ ನುಡಿಗಳಿಂದ ತನು ಸುಖದುಃಖಗಳನ್ನು ಅನುಭವಿಸ್ತುದೆ. ಇವೆರಡರಲ್ಲೂ ಸಂಕಟವಿದೆ. ಮನ ಇವೆರಡನ್ನು ತನುವಿಗೆ ರವಾನಿಸಿ ಸುಖದುಃಖ ವನ್ನುಂಟುಮಾಡುತ್ತದೆ. ಶಬ್ದವನ್ನು ಸುಖದುಃಖದ ಹೊರತಾಗಿ ತಿಳಿಯುವ ಶಕ್ತಿ ಮನಕ್ಕಿಲ್ಲ. ತನುವಿನ ಕಣಕಣದಲ್ಲಿ ತೆರಹಿಲ್ಲದಂತೆ ವಾಸ ಮಾಡಿದ ತೆರಹಿಲ್ಲದಭವ ಸುಖದುಃಖದ ನುಡಿಗಳನ್ನು ನಪುಂಸಕಗೊಳಿಸಿ ತನುವಿಗೆ ಬಡಿದ ನುಡಿಗೆ ಎಡೆಗೊಡದಂತೆ; ಅವಕಾಶಮಾಡಿಕೊಡದಂತೆ; ಕಠೋರವಾಗಿ ಬಡಿದ ಆ ನುಡಿಯನ್ನೇ ಜ್ಞಾನದ ನುಡಿಯಡಿಯನ್ನಾಗಿ ಮಾಡಿ ತನುವಿಗೆ ಉಣಬಡಿಸುತ್ತಾನೆ. ಆತ ಒಡಲೊಡೆಯ. ಒಡಲೊಳಗಿದ್ದು ಒಡಲಿಂಗಾಧಾರವಾಗಿ ಒಡಲು ಸೋಂಕದೆ ಒಡಲು ಬೆಳಗುವ ಪರಿಯ ನೋಡಾ ! ಬೆಳಗಿಂಗೆ ಬೆಳಗಾಗಿ ಬೆಳಗುವ ಪರಿಯ ನೋಡಾ ಎಂದು ಒಡಲೊಡೆಯನನ್ನು ಹಾಡಿ ಹೊಗಳಿದ್ದಾರೆ ಅಲ್ಲಮಪ್ರಭುಗಳು.

ಒಡಲೊಡೆಯ: ಒಡಲಿನ ಜ್ಞಾನ ; ತೆರಹಿಲ್ಲದಭವ.

ಭವರೋಗ : ಒಡಲಿನ ಅಜ್ಞಾನ; ಮನ.

ಶಬ್ದವನ್ನು ಜ್ಞಾನದಿಂದ ಸ್ವೀಕರಿಸಿದರೆ ಬ್ರಹ್ಮ. ಅಜ್ಞಾನದಿಂದ ಸ್ವೀಕರಿಸಿದರೆ ಮೃತ್ಯು. ಕೈಕೇಯಿಯ ಎರಡು ಶಬ್ದಗಳು ರಾಮನನ್ನು ಹದಿನಾಲ್ಕು ವರ್ಷ ವನವಾಸಕ್ಕೆ ತಳ್ಳಿತು. ದ್ರೌಪದಿಯ

ಒಂದು ಅಣುಕಿನ ನಗು ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಬಲಿಪಡೆಯಿತು.

ಶಬ್ದ ನೋಡುವಡೆ ನಪುಂಸಕ ಅದರ ಕಾರ್ಯ ನೋಡುವುದೆ ಹರಿಹರ ಬ್ರಹ್ಮಾದ್ರಿಗಳನೆಲ್ಲ ಮುರಿದಿಕ್ಕಿತ್ತು. ಅದರಂತೆ ಹೋದರೆ ತನ್ನನ್ನು ಬಿಡರು ತಾ ತಿಳಿದು ಹೋದರೆ ತನ್ನ ಕಡೆ ಬರದು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಶಬ್ದ ತಿಳಿಯುವ ಸೂತ್ರವನ್ನು ಮನುಕುಲಕ್ಕೆ ದಯಪಾಲಿಸಿದ್ದಾರೆ. ಹಾಗೆಯೆ ಶಬ್ದ ತಿಳಿಯುವ ಜ್ಞಾನಕ್ಕೆ ಶಿವಶರಣೆ ಸತ್ಯಕ್ಕ ಶಂಭುಜಕ್ಕೇಶ್ವರ ಎಂದು ನಾಮಕರಣ ಮಾಡಿದ್ದಾರೆ.

**ಹೊರಗಿದ್ದಹೆನೆಂದು ನಾನು ಮರೆದು ಮಾತನಾಡಿದೆ.**

**ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು.**

**ತೆರಹಿಲ್ಲದಭವ ನುಡಿಗೆಡೆಗೊಡನು;**

**ಆತನ ಬಯಲಿಂಗೆ ಬೇಟೆಗೊಂಡೆನವ್ವಾ**

**ನಾನೇನ ಮಾಡುವೆನಲೆ ತಾಯೆ.**

**ಮರೆದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು.**

**ತನ್ನನರಿದಡೆ ಒಳ್ಳಿದನವ್ವಾ ನಮ್ಮ ಶಂಬು ಜಕ್ಕೇಶ್ವರನು.**

ಎಂದು ತನುವಿನ ತುಂಬ ತುಂಬಿರುವ ತೆರಹಿಲ್ಲದ ಅಭವನನ್ನು ಬೇಟೆಗೊಂಡು ಅವನೊಂದಿಗೆ ಕೂಡಿ ಅವನೇ ತಾನಾಗಿದ್ದಾಳೆ. ಪರಮ ಪೂಜ್ಯ ಗುರುಗಳಾದ ಶ್ರೀ ವಿದ್ಯಾನಂದ ಶರಣರು ಪರಕಾಯ ಪ್ರವೇಶ ಮಾಡಿದಂತೆ ಸತ್ಯಕ್ಕ ತಾಯಿಯವರ 23 ವಚನಗಳಿಗೆ ತಾತ್ಪರ್ಯ ಬರೆದಿದ್ದಾರೆ. (ತಲೆಬರಹ ಮಾತ್ರ ಕೊಟ್ಟು ಯಥಾರೀತಿ ಪ್ರಕಟಿಸಲಾಗಿದೆ) ಅವರು ಬರೆದ ತಾತ್ಪರ್ಯವನ್ನು ಅಕ್ಷರಗಳ ಮೂಲಕ ಬಣ್ಣಿಸುವುದು ಅಸಾಧ್ಯ. ದಯವಿಟ್ಟು ಓದಿ ಆನಂದಿಸಿ; ಆ ಮಹಾಜ್ಞಾನದ ಬ್ರಹ್ಮಾನಂದವನ್ನು ಪಡೆಯಿರಿ.

**ಶರಣು :**

ಶ್ರೀ ವಿದ್ಯಾನಂದ ಶರಣರು ಬರೆದ ಕೃತಿಗಳನ್ನೆಲ್ಲ ಅಚ್ಚುಕಟ್ಟಾಗಿ ಕಾಯ್ದಿಟ್ಟ ದಂಪತಿಗಳಾದ ಮಹಾದೇವಮ್ಮ ಹಾಗೂ ವೆಂಕನಗೌಡ ಬಸಾಪುರ (ಶರಣರ ಪೂರ್ವಾಶ್ರಮದ ಮಗಳು-ಅಳಿಯ) ಅವರಿಗೆ ಹಾಗೂ ಕರಡು ತಿದ್ದಲು, ಮುದ್ರಿಸಲು ನೆರವಾದ ಮಗಳು ಮುಕ್ತಾಯಕ್ಕ ಅಳಿಯ ಬಿ.ಎಂ.ಜಗದೀಶ ಮುಕ್ತ ಆಫ್‌ಸೆಟ್ ಪ್ರಿಂಟರ್ಸ್ ಯಾದಗಿರಿ ಅವರಿಗೂ ಶರಣು.

**ರಾಯಚೂರು** — **ಬಸವರಾಜ ಸ್ವಾಮಿ**

**ಜುಲೈ 2, 2011** — **ಸಂಪಾದಕ, ಸುದ್ದಿಮೂಲ**

# ಪರಿವಿಡಿ

# ವಚನಾನುಕ್ರಮಣಿಕೆ

# ಅಂತರಂಗದ ನುಡಿ ಲೋಕದ ನುಡಿಯಲ್ಲ

**ಅಡಿಗಡಿಗೆ ನಿಮ್ಮ ಶರಣರಡಿಗೆರಗಿ ಶರಣೆಂಬೆ.**
**ನುಡಿಯ ಬೋಧೆಯ ಮಾತು, ಅನ್ಯ ನುಡಿ ಸಮನಿಸದು.**
**ಓಡುದೇಹದ, ಶಿರ ಬಿಗಿದು, ಮಡು ಗಟ್ಟಿ**
**ಕಂಬನಿಯ ಕಡಲೊಳಗೆ ತೇಲಾಡುತ್ತೆಂದಿಪ್ಪೆನೊ?**
**ಮೃಡಶರಣು ಶರಣೆಂಬ ಶಬ್ದ ಒಡಲುಗೊಂಡು**
**ಶಂಭುಜಕ್ಕೇಶ್ವರ ದೇವರಿಗೆ ಶರಣೆನುತ ಮೈಮರೆದೆಂದಿಪ್ಪೆನೊ?**

ತಾತ್ಪರ್ಯ: ಅಡಿಗಡಿಗೆ ನಿಮ್ಮ ಶರಣರ ಅಡಿಗೆರಗಿ ಶರಣೆಂಬೆ :
ಗುರು ಲಿಂಗ ಜಂಗಮಕ್ಕೆ ನಮಸ್ಕರಿಸುವದು ಶ್ರೇಯಸ್ಸು. ಹಿರಿಯರಿಗೆ ಅಧಿಕಾರ ವರ್ಗಕ್ಕೆ ನಮಸ್ಕರಿಸುವದು ಒಳ್ಳೆಯ ಭಾವ. ಶರಣು ಬಂಧುಗಳಿಗೆ ಶರಣಾಗತರಾಗುವ ಭಾವ ಬರುವುದು ಕಷ್ಟ. ಮನುಷ್ಯನಿಗೆ ಆಪತ್ತು ಬಂದಲ್ಲಿ ಫಲಪದಂಗಳು ಲಭ್ಯವಾಗುವ ಮಟ್ಟಿಗೆ ಶರಣಾಗತ ಭಾವ ತೋರಿಸುವುದು ಶರಣು ಬಂದ ಲಕ್ಷಣವಲ್ಲ.

ಶರಣೆಂದರೆ ಶರಣರ ಪಾದಕಮಲಗಳಿಗೆ ನಮಸ್ಕರಿಸಿ ಶರಣೆನ್ನುವ ಶರಣಾಗತ ಭಾವ ಬಹಳ ಮುಖ್ಯವಾದುದು. ಅದರ ಸಮಾನ ಉಳಿದ ಭಾವಂಗಳು ಸರಿಹೋಗವು.

ಶರಣರೆಂದರೆ ಅಜಾತನ, ನಿರ್ನಾಮಿಯ, ನಿಶಬ್ದಬ್ರಹ್ಮವನೊಲಿಸಿದವರು. ಅವರಿಗೆ ಶರಣೆಂಬೆ. ಇಂತಹ ಶರಣರ ನುಡಿಯ ಬೋಧೆಯ ಮಾತಿಂಗೆ ಅನ್ಯ ನುಡಿ ಸರಿಯಾಗಲಾರವು. ''ಹೊರಗಿದ್ದಿಹನೆಂದು ಮರೆದು ಮಾತನಾಡಿದೆ ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು. ತೆರಹಿಲ್ಲದಭವ ನುಡಿಗೆಡೆಗೊಡನು'' ಎಂಬುದಕ್ಕೆ ಒಪ್ಪಿಕೊಂಡು ಶರಣಾಗತರಾಗಬೇಕು. ಏಕೆಂದರೆ ಶರಣರ ನುಡಿಗೆ ಯಾವುದೂ ಸರಿ ಸಮಾನವಾಗದು. ಅವರದು ನುಡಿಯಲ್ಲ, ಅವರ ನುಡಿಯನ್ನು ನುಡಿಗೊಳಪಡಿಸುವುದು ತಪ್ಪು. ನುಡಿ ಎಂದುದು ತಪ್ಪಾಗಿ, ತ್ರಾಹಿ ಎಂದೆನಿಸಿ, ಕಂಠ ಬಿಗಿದು, ನಡುಗು ಹುಟ್ಟಿ , ಭಯ ಭೀತಿಗೊಂಡು, ಮಾಡದ ತಪ್ಪು ಮಾಡಿದೆ ಎಂದೆನಿಸಿ, ಕಣ್ಣೀರು ದಳದಳನೆ ಹರಿದು ಹೃದಯಕ್ಕೆ ಹೃದಯ ತಪ್ತವಾಗಿ ಎಂದೆಂದಿಗೂ ಆಗದಷ್ಟು ನೋವಾಗಬೇಕು. ಆ ನೋವಿನಿಂದ ಮನ ನರಳಬೇಕು.

ನನ್ನನ್ನು ಸಂರಕ್ಷಣೆ ಮಾಡುವ ' ಶರಣಲಿಂಗ ' ವನ್ನು ಲೋಕದ ಮಾತಿನಂತೆ ಕಂಡು ನುಡಿ ಎಂದು ತಿಳಿದೆನಲ್ಲವೆ? ಶರಣ ದೇವ ದೇವನಿಗೆ ನುಡಿದು ವಂಚಿಸಿ ಭಾಗ್ಯ ಹೀನನಾದ ದುರ್ದೈವಿಯಾದೆನೆ? ನರ ಶರೀರವಿದು ಅರುವಿನ ಶರೀರ ದೊರೆತರೂ ನಿರುಪಯೋಗವಾಯಿತೆ? ಮಾಡುವ ಕಾರ್ಯ ಮಾಡದೇ ಎನ್ನಯ ಮೂರ್ಖತನದಿಂದ ಶರಣರ ನುಡಿಗೆ ಜೋತಿರ್ಲಿಂಗವೆನ್ನದೆ ಮಾತೆಂದೆನಲ್ಲವೆ? ಲೋಕದ ನುಡಿ ಶರಣರ ನುಡಿ ಒಂದು ಮಾಡಿದೆನಲ್ಲವೆ? ಇದಕ್ಕಿಂತ ಹೆಚ್ಚಿನ ಅಪರಾಧ ಮತ್ತಾವುದು?

ಓ ಶರಣು ದೇವಯ್ಯ ನಿಮ್ಮಡಿಗೆ ಶರಣು, ನಿಮ್ಮ ಅಡಿಗಡಿಗೆ ಶರಣು, ನಿಮ್ಮ ಸ್ಥಾನಕ್ಕೆ

ಶರಣು, ನೀವು ಕೂಡುವ ಪೀಠಕ್ಕೆ ಶರಣು, ನಿಮ್ಮ ನೋಟಕ್ಕೆ ಶರಣು, ಓ ನನ್ನಯ್ಯ ನಿಜವಾಗಿ ನೀನು ನನ್ನಯ್ಯ, ನಿನ್ನಂತೆ ಮಾಡಿಕೊಳ್ಳುವ ನನ್ನಯ್ಯ. ನಿನ್ನ ನುಡಿಯನ್ನು ಮಾನವರ ನುಡಿಯಂತೆ ಕಂಡೆನಲ್ಲ ! ನಾನು ಮಹಾನ್ ಪಾಪಿ, ಮಹಾ ಅಜ್ಞಾನಿ. ಎನ್ನ ಹೃದಯ ಕಾರ್ಗತ್ತಲು, ಅದು ಗೂಗೆ ಸಮಾನ. ನಿನ್ನನ್ನು ಕಾಣುವ ಪ್ರಕಾಶ ದಿವ್ಯ ಬೆಳಕು ಅದಕ್ಕೆ ಕೊಡು ತಂದೆ. ನಿನ್ನಲ್ಲಿ ಶರಣಾಗತನಾಗುವ ಭಾವ ನನಗೆ ನೀನೆ ಕೊಡು ನನ್ನಪ್ಪ . ನಿನ್ನ ಅಡಿಗೆ ಶರಣು ಬಂದುದು ಅದು ನಿನ್ನಯ ಕೃಪೆ, ನನ್ನಷ್ಟಕ್ಕೆ ನಾನು ಬಂದವನಲ್ಲ, ಬರುವಷ್ಟು ಮತಿ ನನ್ನದಲ್ಲ ಹಡದಪ್ಪ, ನೀನೆ ನನ್ನ ಹಡದವನಾಗು, ಶರಣು ತಂದೆ, ನನ್ನ ದೂರ ತಳ್ಳಬೇಡ, ನೀನು ಗುರುವಿನ ಗುರು ಮಹಾನ್ ಗುರು.

ಓ ನನ್ನ ದೇವನೆ ಎನ್ನ ಅಂತರಂಗ ದೇವನೆ, ಶರಣರ ಅಂತರಂಗದ ಚಿಜ್ಯೋತಿಯೆ ಬಾರಯ್ಯ ಮಹಾಘನನೆ ನಿರಂತರ ನನ್ನ ಹೃದಯದೊಳು ವಾಸಿಸಯ್ಯ. ಈ ದೀನನ ಆಲಾಪ ನಿನಗೆ ಕೇಳಲೊಲ್ಲದೆ! ಎನ್ನ ಧ್ವನಿ ನಿನಗೆ ಸರಿಬಾರದೆ ! ಕನಿಕರ ತರಲೊಲ್ಲದೇ ?

ಓ ವಿಧಿಯೆ ನನ್ನಷ್ಟು ಹತಭಾಗ್ಯರಾರು ? ಒಲಿಯಬೇಕಾದವರು ಒಲಿಯದಿದ್ದಲ್ಲಿ ನನ್ನ ಬದುಕು ನಿರರ್ಥಕ. ಹೃದಯಕ್ಕೆ ಹೃದಯವೇ ತಲ್ಲಣಿಸಿ ಅತಿ ಗಾಯವಾಗಿ ದುಃಖಿಸುವದು ಕಂಡು ನಿನಗೆ ಕನಿಕರವಿಲ್ಲವೇ ತಂದೆ !

ಹೆಂಡರಿಗಾಗಿ ಅತ್ತೆ, ಮಕ್ಕಳಿಗಾಗಿ ಅತ್ತೆ, ಧನ ಕನಕ ಹೊಲ ಮನೆಗಳಿಗಾಗಿ ಅತ್ತೆ, ಈ ಹೊಲಸು ದೇಹದ ಪ್ರತಿಷ್ಠೆಗಾಗಿ ಅತ್ತೆ, ಅಧಿಕಾರ ಫಲ ಪದವಿಗಳಿಗಾಗಿ ಅತ್ತೆ, ಇವುಗಳೆಲ್ಲವು ನನ್ನವಲ್ಲ , ನಾನಲ್ಲ ಎಂಬುದು ತಿಳಿಯದೇ ಅತ್ತೆ. ಅತ್ತು ಅತ್ತು ಬಾರದ ಭವಂಗಳಲ್ಲಿ ಬಂದರೂ [2] ನಿನಗಾಗಿ ದುಃಖಿಸಲಿಲ್ಲ [2] ವಲ್ಲ, ಏನಿದು ಎನ್ನ ಕಪಟ ಹೃದಯ, ವಂಚಕ ಹೃದಯ, ಪಾಪ ಕೂಪದ ಹೃದಯವ ನೀನು ಅದೆಂತು  ನೋಡುವೆ ತಂದೆ ?

''ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ'' ಕೂಸಿನ ಮೇಲೆ ಮುನಿಸಿಕೊಂಡಡೆ ಅದು ಬದುಕುವದೆಂತು, ನಿಮ್ಮಡಿಗೆ ಎರಗುವದೆಂತು, ಹೆಜ್ಜೆ ಹೆಜ್ಜೆಗೆ ನೆನಹಿನಲ್ಲಿರುವುದೆಂತು? ಕರುಣಾಕರ, ನಿಮ್ಮ ಕರುಣಾರಸಾಬ್ಧಿಯ ಕಡಕೋಡಿಯೇ ಎನ್ನಮೇಲೆ ಒಡೆಯುವಂತೆ ಮಾಡಿ, ನನ್ನ ಹೃದಯಕ್ಕೆ ಹೃದಯವೇ ನಿಮ್ಮ ಮಹಾಬೋಧೆಗಾಗಿ ; ಈ ದೇಹದ ಇಡೀ ಆಯುಷ್ಯವನ್ನು ಮೀಸಲಾಗಿರುವಂತೆ ಕರುಣಿಸು ನನ್ನಯ್ಯ.

ನಿಮ್ಮ ಮಹಾಬೋದೆಗೆ ನುಡಿಯೆಂದುದು ತಪ್ಪು ತಪ್ಪು ತ್ರಾಹಿ ತ್ರಾಹಿಯಾಗಿ ಹೃದಯಕ್ಕೆ ಪೆಟ್ಟಾಗಿ ನಡು ನಡುಗಿ ಭಯ ಭೀತನಾಗಿ ಕಣ್ಣೀರಿನಲ್ಲಿ ಮನ ತೇಲಾಡುತ ಎಂದಿಪ್ಪೆನೊ? ಶಿವಶರಣರ ಮಹಾನುಭವಕ್ಕೆ ಶರಣೆಂಬ ಶಬ್ದ ಇಡೀ ದೇಹವೇ ತುಂಬಿ ಶರಣ ಶಂಭು ಜಕ್ಕೇಶ್ವರ ದೇವರಿಗೆ ಶರಣೆನುತ ಮೈಮರೆತು ಎಂದಿರುವೆನೊ ! [3] ಓ ನನ್ನಯ್ಯ[3] ನನ್ನಪ್ಪ ಎನ್ನೊಡೆಯ ಇಂತಪ್ಪ ಶರಣು ಭಾವ ಎನಗೆ ನೀಡು ತಂದೆ ಜಯ ಜಯ ಜಯತು ಎಂದು ಜಯ  ಘೋಷಿಸುವೆ.



1. ಶರಣ ಜ್ಞಾನ 2.ನನ್ನೊಳಗಿನ ಮಹಾಜ್ಞಾನಕ್ಕಾಗಿ 3.ನನ್ನ ದೇಹವನ್ನು ಆವರಿಸಿಕೊಂಡ ಮಹಾಜ್ಞಾನ ಬೋಧಿಯೆ.

# ಪರಧನ ಪರಸ್ತ್ರೀ ಪರದೈವಂಗಳಿಗೆರದಿಪ್ಪುದೇ ನೇಮ

**ಅರ್ಚನೆ ಪೂಜನೆ ನೇಮವಲ್ಲ, ಮಂತ್ರ ತಂತ್ರ ನೇಮವಲ್ಲ,**
**ಧೂಪ ದೀಪಾರತಿ ನೇಮವಲ್ಲ,**
**ಪರಧನ ಪರಸ್ತ್ರೀ ಪರದೈವಂಗಳಿಗೆರದಿಪ್ಪುದೇ ನೇಮ.**
**ಶಂಭುಜಕ್ಕೇಶ್ವರನಲ್ಲಿ ಇವು ಕಾಣೆರಣ್ಣಾ ನಿತ್ಯ ನೇಮ.**

**ತಾತ್ಪರ್ಯ - ಅರ್ಚನೆ ಪೂಜನೆ ನೇಮವಲ್ಲ :**

ಅರ್ಚಿಸುವುದು ಪೂಜಿಸುವುದು ನೇಮವಲ್ಲ. ಕುರುಹುಳ್ಳವನಿಗೆ ಅರ್ಚನೆ ಉಂಟು. ಪೂಜೆಯ ನೇಮವುಂಟು. ನಿರೂಪ ದೇವನಿಗೆ ಅದೆಂತು ಅರ್ಚನೆ? ಅದೆಂತು ಪೂಜೆಯ ನೇಮ?

ಅರುಹ ಅರಿಯ ಹೇಳಿ ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟ. ಇದು ಗುರು ಕಾರುಣ್ಯ. ಅರಿಯಬಾರದ ಘನ ಎಂದು ಅರಿಯ ಹೇಳಿ, ನರರು, ಸುರರು, ಮೊದಲಾದವರು ದೇವಗಣ, ರುದ್ರಗಣ, ಪ್ರಮಥಗಣ ಮೊದಲಾದವರು ಅರಿಯ ಬಾರದ ಘನ. ಸತ್ಯರು ನಿತ್ಯರು ಮುಕ್ತರೆಂಬ ಮಹಾಮಹಿಮರು ಅರಿಯಬಾರದ ಘನ, ಇಂತಪ್ಪ ಮಹಾದರುವನರುಹಿಸಿದ ಗುರುಘನನ ಅರಿಯಲುಂಟೆ? ಅರ್ಚಿಸಲುಂಟೆ? ಪೂಜಿಸಲುಂಟೆ ?

ಇವರು ಲಿಂಗವ ಅರಿಯದವರು. ಇತ್ತ ತಾನಾರೆಂದು ತನ್ನ ಅರಿಯದವರು. ಜಂಗಮವನು ಅರಿಯದವರು. ಇದು ಕಾರಣ ಅರಿಯಬಾರದ ಘನವರಿತು ಅರಿಯದಂತಿದ್ದವರು ಅಲ್ಲ. ಅರುಹಿಸಿಕೊಂಬ ಪಿಂಡಾಂಡ ಬ್ರಹ್ಮಾಂಡದಲ್ಲಿರುವ ಫಲಪದಂಗಳ ನಂಬಿದವರು. ಅದನ್ನು ಸತ್ಯವೆಂದು ತಿಳಿದುದರಿಂದ ಅರಿಯಬಾರದ ಘನವಾಗಿಹ ನಿರೂಪಲಿಂಗವನ್ನು ರೂಪಾಗಿ ಕಂಡು ಅರ್ಚನೆ, ಪೂಜನೆ, ನೇಮವಾಯಿತು.

''ಅರ್ಚನೆ ನೇಮದವರು ಒಂದು ಕೋಟಿ, ಪೂಜೆಯ ನೇಮದವರು ಒಂದು ಕೋಟಿ, ಪತ್ರೆಯ ನೇಮದವರೊಂದು ಕೋಟಿ. ಲಿಂಗಾರ್ಚನೆಯ ನೇಮದವರೊಂದು ಕೋಟಿ, ಜಂಗಮ ತೃಪ್ತಿ ನೇಮದವರೊಂದು ಕೋಟಿ, ತನ್ನ ತಾ ತಿಳಿಯುವ ನೇಮದವರೇ ವೀರಶೈವ ಅಗ್ರಗಣ್ಯರು ಕಪಿಲ ಸಿದ್ಧ ಮಲ್ಲಿಕಾರ್ಜುನ''. ದೇವನಿಗೆ ಪತ್ರೆ ನೇಮ, ಪುಷ್ಪ ನೇಮ, ಜಪ ನೇಮ, ಮಂತ್ರ ನೇಮ. ತಂತ್ರ ನೇಮ, ಧೂಪ ನೇಮ, ದೀಪಾರತಿ ನೇಮ ಈ ನೇಮದವರೆಲ್ಲ ಬೇಡಿ ಬಂಧನಕಾರಿಗಳಾಗಿಹರು. ದೇವ ನುಡಿಗೆಡೆಗೊಡದವನು ಎಂಬ ಶರಣ ಶರಣೆಯರ ನುಡಿಯ ಬೋಧವರಿಯದೆ ಕುರುಹೇ ದೇವರೆಂದು ಕಾಣಬಾರದ ಘನವ ಕಾಣದಂತಾದರು. ತೋರಬಾರದ ಘನವ ತಿಳಿಯದಂತಾದರು.

ಮಾತಿಲ್ಲದವಂಗೆ ಮೌನವೇ ನಿಜವಾದ ಜಪವಾಗಿದೆ. ಕಿವಿಗೆ ಕೇಳದ ಮಂತ್ರವೇ ಹೃದಯದಲ್ಲಿ ಕಾಣುವ ಮಂತ್ರವಾಗಿದೆ. ಅಲುಪ್ತ ಪ್ರಕಾಶ ಮುಂದೆ ದೀಪಾರತಿಯ ಅವಶ್ಯಕತೆ ಏನು? ಸುಮನದ ಮುಂದೆ ಸುಗಂಧವಾಗಿಹ ಧೂಪದ ಅವಶ್ಯಕತೆ ಏನು? ಕಾರಣ ತೆರಹಿಲ್ಲದಭವ ನುಡಿಗೆಡೆಗೊಡನು ಎಂಬ ಶರಣೆಯರ ಸಂಜ್ಞೆಯ ಅರಿಯುವ ಶರಣ ಶರಣೆಯರಿಗೆ ಅರ್ಚನೆ, ಪೂಜನೆ ನೇಮವಲ್ಲ, ಮಂತ್ರ ತಂತ್ರ ನೇಮವಲ್ಲ, ಧೂಪ ದೀಪಾರತಿ ನೇಮವಲ್ಲವೆಂದು ಹೇಳಿಹಳು.

**ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೇ ನೇಮ. ಶಂಭುಜಕ್ಕೇಶ್ವರನಲ್ಲಿ ಇವು ಕಾಣೆರಣ್ಣಾ ನಿತ್ಯ ನೇಮ:**

ಪರಧನ ಆವುದು ಗೊತ್ತೆ? ''ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿಯು ನಿನ್ನವಳಲ್ಲ; ಇವು ಜಗಕಿಕ್ಕಿದ ವಿಧಿ. ನಿನ್ನೊಡವೆ ಎಂಬುದು ಜ್ಞಾನ ರತ್ನ. ಆ ರತ್ನವ ಕೆಡಗೊಡದೆ ಅಲಂಕರಿಸಿದೆಯಾದಡೆ ಗುಹೇಶ್ವರ ಲಿಂಗದಲ್ಲಿ ನಿನಗಿಂತ ಸಿರಿವಂತರು ಅನ್ಯರಿಲ್ಲ''. ನರರಿಗಾಗಲಿ, ಸುರರಿಗಾಗಲಿ, ಆವುದೂ ತನ್ನದಲ್ಲ. ತನ್ನದಾಗದ್ದಕ್ಕೆ ತನ್ನದೆಂದು, ''ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ ದೇವಾ ನಿನಗಾಗಿ ಸತ್ತವರನೊಬ್ಬರನು ಕಾಣೆ ಗುಹೇಶ್ವರಾ''.

ಮಾನವ ತನ್ನದಾಗದ ಭೂಮಿಯು ತನ್ನದೆಂದು, ಹೇಮವು ತನ್ನದೆಂದು ಕಾಮಿನಿಯು ತನ್ನವಳೆಂದು ಹೋರಾಡಿ ವ್ಯರ್ಥಸತ್ತುಹೋದ, ದೇವನಿಗಾಗಿ ಸತ್ತವರು ಒಬ್ಬರೂ ಇಲ್ಲ, ತಾನಾರೆಂದು ತನ್ನ ತಿಳಿಯಲು ಸತ್ತವರಿಲ್ಲ. ಗುರುವಿಗಾಗಿ ಪ್ರಾಣ ಕೊಟ್ಟವರುಂಟು, ಗುರುವಿನ ಗುರುವ ತಿಳಿಯಲು ಸತ್ತವರು ಒಬ್ಬರೂ ಇಲ್ಲ, ಗುರುವಿಂಗೆ ಗುರುವಾದುದು, ಸಕಲರ ಅಂತರಂಗದಲ್ಲಿ ಹೂಳಿಟ್ಟ ನಿಧಿ, ಅದು ಅಕ್ಷಯ ಸಂಪತ್ತು. ಅದು ಅರಿಯಬಾರದ ಘನ. ಇಂತಪ್ಪ ಅರಿಯಬಾರದ ಘನವರಿತು ಅರಿಯದಂತಿದ್ದವರೆ ನಿಜವಾದ ಸಿರಿವಂತರು. ಅವರು ಪರ ಧನಕ್ಕೆರಗದಿಪ್ಪ ನೇಮದವರು. ಇದು ಅರುಹೃದಯವಾದವರ ಸಿರಿಯು. ಅರುವಿಂಗರುವಾಗಿಹ ಸಿರಿಯು. ತೆರಹಿಲ್ಲ ಲಿಂಗ ಭರಿತವೆಂಬ ಜ್ಞಾನರತ್ನವುಳ್ಳ ಸಿರಿವಂತರು. ಇಂತಪ್ಪ ಅಕ್ಷಯ ಸಂಪತ್ತುಳ್ಳವರೇ ಪರಧನಕ್ಕೆರಗದಿಪ್ಪ ನೇಮದವರು ಎಂದು ಹೇಳಿಹಳು.

**ಪರಸ್ತ್ರೀಯಳಿಗೆರಗದಿಪ್ಪುದೇ ನೇಮ :**

ಸತಿ : ಶರಣಸತಿ ಎಂಬುದೆ ನಿಜ ನಾಮ. ನಿಜವಾದ ಸತಿ ಎಂದರೆ ಶರಣಸತಿ. ''ಸತಿಯ ಕಂಡು ವ್ರತಿಯಾದ ಬಸವಣ್ಣ, ವ್ರತಿಯಾಗಿ ಬ್ರಹ್ಮಾಚಾರಿಯಾದ, ಬ್ರಹ್ಮಾಚಾರಿಯಾಗಿ ಭವಗೆಟ್ಟನಯ್ಯ ಗುಹೇಶ್ವರನಲ್ಲಿ ಬಾಲಬ್ರಹ್ಮಾಚಾರಿಯಾದಾತ ಬಸವಣ್ಣನೊಬ್ಬನೆ ''. ಆರು ಸತಿಯ ಕಂಡಿಹರು ಅವರು ಗುರುಲಿಂಗ, ಶಿವಲಿಂಗ, ಜಂಗಮಲಿಂಗ ವ್ರತದವರು. ಲಿಂಗ ಒಂದಾಗಿರ್ದ ಜಂಗಮ ವ್ರತದವರು. ಗುರು ಶಿಷ್ಯರೆಂಬ ಪ್ರತಿಭಾವ ನಷ್ಟಮಾಡಿ ಭಾವಕ್ಕಗಮ್ಯವಾಗಿಹ ಗುರುಲಿಂಗ ವ್ರತದವರು. ಬ್ರಹ್ಮವೆ ತಾನಾದ ತನ್ನ ಆಚಾರದವರು. ಒಡಲಳಿದ ಆಚಾರದವರು. ಅವರ ಆಚಾರ ಅಗೋಚರವಾಗಿ ಭವಗೆಟ್ಟನಯ್ಯಾ ಗುಹೇಶ್ವರನಲ್ಲಿ, ಬಾಲಭ್ರಹ್ಮಚಾರಿ ಬಸವಣ್ಣನೊಬ್ಬನೆ ಎಂದು ಬಿತ್ತರಿಸಿದುದು ನೋಡಿದೆಡೆ ಬಸವಣ್ಣನೊಬ್ಬನೆ ಸತಿಯ ನೇಮವ ಬಲ್ಲಾತ.

ಲಿಂಗಾಂಗ ಸಾಮರಸ್ಯ ಸುಧೆಯ ಸೇವಿಸಿದವರೆ ಸತಿಯ ವ್ರತವುಳ್ಳವರೆಂದು ತಿಳಿವುದು. ''ಸತಿಯರ ನರಮಾಂಸ ಪುತ್ಥಳಿಯ ನಿಚ್ಚ ನಿಚ್ಚ ಕಡಿದುಕೊಂಡು ತಿಂಬ ನಾಯಿಗಳಿಗೆ ಎಲ್ಲಿಯದು ವ್ರತ ಶೀಲ ಸಂಬಂಧ? ಅದರ ಅದರ ಸೇವನೆಯೆ ಸುರೆಮಾಂಸ, ಕಾಮವೆ ಕಬ್ಬಲಿಗ, ಕ್ರೋಧವೇ ಹೊಲೆಯ, ಲೋಭವೆ ಕಳ್ಳ, ಮೋಹವೆ ಬಲೆಗಾರ, ಮದವೆ ಮಾದಿಗ, ಮತ್ಸರವೇ ಸುರಾಪಾನಿ. ಇಂತಿ ಷಡ್ವಿಧ ಭವಿಯ ತಮ್ಮೆದೆಯೊಳಗೆ ಇಂಬಿಟ್ಟುಕೊಂಡು ಭವಿ ಪಾಕ, ಪರಪಾಕ ಎಂಬ ಪಂಚಮಹಾಪಾತಕರ ಮೆಚ್ಚುವನೆ ಕೂಡಲ ಚೆನ್ನ ಸಂಗಮದೇವಾ''.

ಮಾನವನ ಮತಿ ವಿಪರೀತವಾದುದು. ಸತಿ ಆರು ಪರಸತಿ ಆರು ? ಎಂಬ ಪರಿಚಯವಿಲ್ಲದೆ ವಿರುದ್ಧವಾಗಿ ತಿಳಿದಿಹನು. ಶರಣಸತಿ ಲಿಂಗಪತಿ. ಪತಿ ಒಬ್ಬನೆ, ಸತಿ ಒಬ್ಬಳೆ, ಚೈತನ್ಯ ದೇವನೆ ಪತಿ. ಲಿಂಗದೇವನೇ ಪತಿ. ತೆರಹಿಲ್ಲದ ಭವನೆ ಪತಿ. ನುಡಿಗೆಡೆಗೊಡದವನೆ ಪತಿ. ತೆರಹಿಲ್ಲದ ಲಿಂಗಭರಿತನೆ

ಪತಿ. ಲಿಂಗಾಂಗ ಸಮರಸ ಜ್ಞಾನವೆ ಸತಿ. ಸಮದೃಷ್ಟಿಯೇ ಸತಿ. ಸಮಭಾವ, ಸಮರತಿ, ಸಮಕಲೆಯುಳ್ಳವ ಸತಿ. ಸಮದೃಷ್ಟಿಯುಳ್ಳವನೆ ಸತಿ. ಲಿಂಗಾಂಗ ಸಾಮರಸ್ಯ ಸುಧೆಯ ಸೇವಿಸುವವರೆ ಶರಣ ಸತಿಯಾಗಿಹಳು. ಅರಿಯಲಿಲ್ಲದ ಅರುವರಿತು ಅದುವೆ ಆದುದೆ ಶರಣ ಸತಿ. ಸುಖದ ಸುಖಿಯಾಗಿಹುದೇ ಶರಣ ಸತಿ. ಅಮರಾನಂದದಲ್ಲಿರುವುದೇ ಸತಿ ಎಂದು ಹೇಳಿಹಳು.

ಶರಣರು ಸತಿಯ ವ್ರತದವರು. ಬಸವಣ್ಣ, ಹಡಪದ ಅಪ್ಪಣ್ಣ, ಮಡಿವಾಳ ಮಾಚಿ ತಂದೆ ಕಿನ್ನರಿ ಬೊಮ್ಮಯ್ಯ ಉರಿಲಿಂಗಪೆದ್ದಿ, ಮೋಳಿಗೆ ಮಾರಯ್ಯ ತಂದೆ ಮತ್ತು ಶರಣೆಯರು. ನೀಲಾಂಬಿಕೆ ಅಮುಗೆಯ ರಾಯಮ್ಮ, ಅಕ್ಕಮಹಾದೇವಿ, ಸತ್ಯಕ್ಕ, ಅಕ್ಕ ನಾಗಲಾಂಬಿಕೆ ಮೊದಲಾದವರು ಸತಿಯ ವ್ರತದವರು. ತಾನಾರೆಂದರಿತು ತನ್ನ ಸ್ವಸ್ವರೂಪ ಸುಖ ಸವಿಯುವ ಸುಖಾತ್ಮವೆ ಶರಣ ಸತಿಯರು. ಉಳಿದವರು ನರಮಾಂಸ ಪ್ರೇಮಿಗಳು. ಮಾಂಸದ ಗೊಂಬೆಗೆ ಮೋಹ ಮಾಡಿ ಅದರಲ್ಲಿಯೆ ನಿಷ್ಠೆ ಇಟ್ಟು ಅದರಲ್ಲಿಯೆ ವಿಶ್ವಾಸವಿಟ್ಟವರಿಗೆಲ್ಲ ಎಲ್ಲಿಯವ್ರತ ಶೀಲ ಸಂಬಂಧ? ಮಾಂಸ ಪ್ರೇಮಿಗಳು ಮಾಂಸದ ಸತ್ಯತ್ವ ಬುದ್ದಿಯುಳ್ಳವರು ಅಮರತ್ವದ ಹೊಲಬನರಿಯ ಬಹುದೆ? ಅಜಾತ ತಾನೆಂದರಿಯಬಹುದೆ? ಕೂಟವಿಲ್ಲದ ಪುರುಷನ ಕಾಣಬಹುದೆ? ಮಾಂಸದ ದೃಷ್ಟಿಯುಳ್ಳವ ತನ್ನ ಅಂತರಂಗದೊಳಗಿರ್ದ ಗುರು ಲಿಂಗವರಿಯಬಹುದೆ? ತಿಳಿಯದಿದ್ದಲ್ಲಿ ಪವಿತ್ರಾತ್ಮರಾಗಬಹುದೆ? ಇವರಲ್ಲಿ ಕಾಮವಿದೆ, ಕ್ರೋಧವಿದೆ, ಲೋಭವಿದೆ, ಮೋಹವಿದೆ, ಮದ ಮತ್ಸರಗಳಿವೆ ಎಂದಲ್ಲಿ ಅಸುರಿ ಸಂಪತ್ತಿನ ಪ್ರೇಮಿಗಳೆ ತಾವಿದ್ದು, ತಾನು ಏಕ ಪತ್ನಿ ವ್ರತಸ್ಥ ಎನ್ನುವದು ಎಷ್ಟು ಅಸಂಬಂಧ ಮಾತು, ಅದೆಷ್ಟು ತಿಳಿಯದ ಬಾಲಕರ ಮಾತು. ಇವರಿಗೆ ಎತ್ತಣ ಆಚಾರ ಸಂಬಂಧ. ಸತಿಯರ ಅಧರ ಸೇವನೆಯೆ ಮಧುಮಾಂಸ, ಉದರ ಸೇವನೆಯೆ ಸುರೆ ಮಾಂಸ.

ಇಂತಪ್ಪ ಮಾಂಸ ಪ್ರೇಮದ ಕಾಮವೆ ಕಬ್ಬಲಿಗ. ಕ್ರೋದಿಯೆ ಹೊಲೆಯ, ಲೋಭವೆ ಕಳ್ಳ, ಮೋಹವೆ ಬಲೆಗಾರ, ಮದವೆ ಮಾದಿಗನಾಗಿ, ಮತ್ಸರವೆ ಸುರಾ ಪಾನಿಯಾಗಿ ಇಷ್ಟು ಅಪವಿತ್ರವಾಸನೆ ತಮ್ಮೊಳಗಿಟ್ಟುಕೊಂಡು ತತ್ವವೇತ್ತರಿಗೆ ಜಾರ, ಚೋರ, ಗೊಲ್ಲ, ಗಾರುಡಿಗ, ತಾಂತ್ರಿಕ, ಯಾಂತ್ರಿಕನೆಂದು ಪರತತ್ವ ನಿಜ ಸಂಯುಕ್ತರು ಆನು ನೀನೆನ್ನದಿಹ ನಿಶಬ್ದ ವೇದಿಗಳು ತಾವೆಂದು ತಿಳಿದು ಮಹಾಂತರ ಮಹಾನುಭವ ಲಕ್ಷಿಸದೆ, ಅವರು ಅತೀಂದ್ರಿಯರಾಗಿಹ ಆಚಾರ, ಅಗೋಚರರದ ರಹಸ್ಯವ ತಿಳಿಯದೆ ತಮ್ಮ ಕಣ್ಣೊಳಗಿನ ಕಟ್ಟಿಗೆಯ ಕಿತ್ತಿಕೊಳ್ಳದೆ ಕಾಲೊಳಗಿನ ಮುಳ್ಳು ತಾವೆ ತಕ್ಕೊಳ್ಳದೆ, ಅಂಗದಲ್ಲಿದ್ದ ಅಹಂಕಾರವ ಸುಡದೆ, ತನ್ನ ಮಾಯಾ ಪ್ರಪಂಚ ಕಳೆದುಕೊಳ್ಳದೆ, ತನ್ನಿಂದ ತಾನೇ ಲಿಂಗವೆಂದು ಅರಿಯದೆ ನಾವು ಸತಿಯ ವ್ರತದವರೆಂದು ಮಾಂಸ ದೃಷ್ಟಿಯುಳ್ಳವರೆ ಮಂತ್ರ ಪಿಂಡದವರಾಗಿಹೆವೆಂದು ನಿತ್ಯ ಮಂತ್ರ ಜಪಿಸುವುದೇ ನಿತ್ಯ ನೇಮವೆಂದು ತಿಳಿದವರಿಗೆ ಎಲ್ಲಿಯ ವ್ರತ ಶೀಲ ಸಂಬಂಧವು. ಗುರುಕರುಣೆಯಿಂದ ಗುರುವರಿತ ಬಳಿಕ ಗುರುವಲ್ಲದೆ ತಾನಿಲ್ಲ. ತಾನಿಲ್ಲಾಗಿ ಓದಲಿಲ್ಲ. ಓದಲಿಲ್ಲಾಗಿ ಕೇಳಲಿಲ್ಲ, ಕೇಳಲಿಲ್ಲಾಗಿ ಹೇಳಲಿಲ್ಲ, ಹೇಳಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯಲಿಲ್ಲದರುವ ನರುಹಿಸಿದಲ್ಲಿ ಅರಿಯಲಿಲ್ಲದ ಅರುವೆ ತಾನಾಗಿಹನು ಅಂತಪ್ಪ ಮಹಾಂತ ಶರಣ ಸತಿ ವ್ರತದವರು. ಅವರು ನಿರ್ಲೇಪರು, ನಿಜೈಕ್ಯರು. ಅಂಗ, ಮನ, ಪ್ರಾಣದ ಮೇಲೆ ಲಿಂಗ ಸಾಹಿತ್ಯವ ಮಾಡಿ ಸರ್ವಾಂಗ ಲಿಂಗವಾಗಿಹ ಶರಣರು ಮಾತ್ರ ಪರಸತಿಯ ನೋಡದವರು. ಉಳಿದವರಿಗೆ ಪರಸತಿಯರೆಂಬ ಜ್ಞಾನವು ಸರಿಯಾಗಿ ಆಗದೆ ವಿಪರೀತವಾಗಿ ತಿಳಿದುದರಿಂದ ನಾಮರೂಪೆಂಬ ಹುಸಿ ವ್ರತವುಳ್ಳವರು, ಹುಸಿ ನಿಷ್ಠೆವುಳ್ಳವರು, ಹುಸಿ

ಆಚಾರಕ್ಕೆ ಮೆಚ್ಚಿ ತಮ್ಮ ನಿಜ ಸ್ವರೂಪವ ತಿಳಿಯದವರು. ಇಲ್ಲದ ಗಂಡು ಹೆಣ್ಣನ್ನು ಒಪ್ಪಿಕೊಂಡು ಇದ್ದ ನಿರಂತರ ಅಖಂಡ ಜ್ಞಾನಾನಂದವ ತಿಳಿಯದಂತಾಗಿ ನಾಮರೂಪವೆ ಸತ್ಯವೆಂದಲ್ಲಿ ಆರಿಗಾರು ಹೇಳ ಲಿಲ್ಲ, ಕೇಳಲಿಲ್ಲ, ಮೋಸವೇ ಮೋಸ, ಭ್ರಮಯೇ ಭ್ರಮೆ, ಮರವೆ ಮರವು, ಹುಚ್ಚೆ ಹುಚ್ಚು, ಕತ್ತಲೆ ಯಲ್ಲಿ ಆರಿಗಾರ ಪರಿಚಯವಾಗಬೇಕು. ಕುರುಡರ ನಾಟಕ, ಕುರುಡರ ಸಮ್ಮೇಳನ, ಕುರುಡರೆ ನೋಡು ವುದು ಎಂದಲ್ಲಿ ಅಲ್ಲಿ ತೆರಹಿಲ್ಲದಭವನ ವಿಚಾರಕ್ಕೆ ಆಸ್ಪದವೆಲ್ಲಿ? ಮಾಂಸ ಪಿಂಡದ ವೃತ್ತವೆ ವ್ರತವಾದಲ್ಲಿ ಆರುವಿಂಗರುವಾಗಿಹ ಶರಣಸತಿಯ ಸಂಬಂಧ ಅದೆಲ್ಲಿಯದು.

**ಪರದೈವಂಗಳಿಗೆರಗದಿಪ್ಪುದೆ ನೇಮ :**

ಇದಕ್ಕೆ ತದ್ವಿರುದ್ದವಾಗಿ ಪರದೈವಕ್ಕೆರಗುವದೆ ನಿಜವಾದ ದೈವಕ್ಕೆರಗಿದಂತಾಗಿದೆ. '' ಮಡಕೆ ದೈವ, ಮೊರ ದೈವ ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲನಾರಿ ದೈವ ಕಾಣಿರಯ್ಯ ಕೊಳಗ ದೈವ, ಗಿಣ್ಣಿಲು ದೈವ, ಕಾಣಿರಯ್ಯ ದೈವ ದೈವವೆಂದು ಕಾಲಿಡಲು ಇಂಬಿಲ್ಲ ದೇವನೊಬ್ಬನೆ ಕೂಡಲಸಂಗಮದೇವ ''.

ಖಂಡಾಖಂಡ ಸಂಯೋಗ ವಿಲ್ಲದ ಅಖಂಡಿತನ ನಿಲುವು ತನ್ನಲ್ಲಿಯೇ ಅಲ್ಲದೆ ಬೇರೆ ಮತ್ತೆ ಲ್ಲಿಯೂ ಇಲ್ಲ. ಅಖಂಡಿತನ ನಿಲುವಾಗಿಹ ಕೂಡಲ ಸಂಗಯ್ಯನನ್ನು ತನ್ನಲ್ಲಿ ನೋಡುವವರೇ ನಿಜವಾದ ದೈವಕ್ಕೆರುಗುವವರ ನಿಜದ ನೇಮ. ಉಳಿದವರು ಪರದೈವಕ್ಕೆರಗಿದವರು ಅದು ನೇಮವಲ್ಲ.

**ಶಂಭುಜಕ್ಕೇಶ್ವರನಲ್ಲಿ ಇವು ಕಾಣಿರಣ್ಣಾ ನಿತ್ಯನೇಮ :** ಎಂದು ಹೇಳಿಹರು. ಪರಧನ, ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೆ ನೇಮ. ಶಂಭುಜಕ್ಕೇಶ್ವರನಲ್ಲಿ ಇವು ಕಾಣಿರಣ್ಣಾ ನಿತ್ಯನೇಮಂಗಳೆಂದು ತಿಳಿವುದು.



# ಮಹಾಜ್ಞಾನದಲ್ಲಿ ಐಕ್ಯನಾದ ಅನುಭಾವಿ

**ಅಯ್ಯಾ, 'ಮಹಾಲಿಂಗೈಕ್ಯಾನುಭಾವಿ'ಯೆಂದು ಪೂರ್ವಾರ್ಜಿತವನುಂಡಡೆ ಭಂಗ ;**
**ಹರ ಶರಣೆಂದು ಭವ ಮಾಲೆಗೆ ಒಳಗಾದಡೆ ಭಂಗ.**
**ಹರವಶವೆನಿಸಿ ವಿಧಿವಶವೆನಿಸಿದಡೆ**
**ಅದು ನಿಮಗೆ ಭಂಗ ಕಾಣಾ ಶಂಭುಜಕ್ಕೇಶ್ವರಾ.**

**ತಾತ್ಪರ್ಯ:ಅಯ್ಯಾ ಮಹಾಲಿಂಗೈಕ್ಯಾನುಭಾವಿಯೆಂದು ಪೂರ್ವಾರ್ಜಿತವನುಂಡಡೆ ಭಂಗ :**
ಮಹಾಲಿಂಗೈಕ್ಯಾನುಭಾವಿಗಳು ಗುರುಕರುಣೆಯಿಂದ ಗುರುವರಿತು ಗುರುಲಿಂಗವಾದವರು. ತನ್ನ ಅಂತರಂಗದಲ್ಲಿ ಸ್ವಯಲಿಂಗ ಸ್ಥಲವರಿತವರು. ಹೇಳಬಾರದ ಜಂಗಮ ಸ್ಥಲದಲ್ಲಿ ನಿಂತವರು. ಕೇಳಬಾರದ ಪ್ರಸಾದ ಲಿಂಗಸ್ಥಲದಲ್ಲಿ ನಿಂತವರು. ಇವರು ಅಕಾಯರು. ಹೇಳಲು ಬಾಯಿ ಇಲ್ಲ, ಕೇಳಲು ಕಿವಿಯಿಲ್ಲ . ಅರಿಯಲಿಲ್ಲದ ಅರುವ ಅರಿತು ಅರಿಯಲಿಲ್ಲದ ಅರುವೆ ತಾನಾಗಿಹ ಮಹಾ ಲಿಂಗೈಕ್ಯಾನು ಭಾವಿಗಳು.

ತನ್ನಲ್ಲಿಯೆ ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಈ ಚತುರ್ವಿಧ ಲಿಂಗ ಒಂದಾಗಿ ಕಂಡು ಶಬ್ದಕ್ಕೆ ತೆರಹಿಲ್ಲ ವಾಗಿಹ [1] ಶಬ್ದ ಮುಗ್ಧರು.[1] ಶಬ್ದವೆ ಮೀಸಲಾಗಿ ಭಾವ ಕ್ಕಿಂಬಿಲ್ಲವಾಗಿ ನುಡಿಗೆಡೆಯಿಲ್ಲವಾಗಿ ಆದಿ ಮಧ್ಯ ಅಂತ್ಯವ ಕಾಣದ ನಿರವಧಿಯ ಸುಖದ ಸುಖವೆ ಸುಖದೇಕ ರಸವೆ ಮಹಾಲಿಂಗೈಕ್ಯಾನು ಭಾವಿಯಾಗಿಹ ಮಹಾಂತ. ಅವನೆಂತು ಹಳೆಯ ಬಟ್ಟೆಯ ಕಾಣುವನು ? ಅವನೆಂತು ತನು, ಇಂದ್ರಿ, ಪ್ರಾಣ, ಮನ, ಬುದ್ಧ್ಯಾದಿಗಳ ಕಾಣುವನು ? ಇದುವೆ ಕಾಣದಿದ್ದಲ್ಲಿ ಈ ಉಪಾಧಿಯ ಪುಣ್ಯ ಪಾಪವನೆಂತು ಉಪಭೋಗಿಸುವನು ? ಪೂರ್ವಾ ರ್ಜಿತ ಕಂಡಡೆ, ಪುಣ್ಯವ ಕಂಡಡೆ ಅದು ಭಂಗ. ಪೂರ್ವದಲ್ಲಿ ಕಂಡುದು ಪುನಃ ಕಂಡಡೆ ಅವನು ಭೋಗಿಯಾಗಿರಲಿ, ತ್ಯಾಗಿಯಾಗಿರಲಿ, ಗೃಹಸ್ಥನಾಗಿರಲಿ, ತಿರುಕನಾಗಿರಲಿ, ಶ್ರೀಮಂತನಾಗಿರಲಿ, ಅದು ತನ್ನ ಮಹಾಲಿಂಗೈಕ್ಯಾನು ಭಾವದಲ್ಲಿ ಕಂಡಡೆ ಅದು ಭಂಗ. ಮಹಾಲಿಂಗೈಕ್ಯಾನುಭಾವವದು ತೆರಹಿಲ್ಲದಭವ, ನುಡಿಗೆಡೆಗೊಡದ ಘನವು ತನ್ನಿರುವು ತಾನಾಗಿದ್ದಲ್ಲಿ ಅರಿವ ಅರುಹಿಸಿಕೊಂಬ ಇವೆ ರಡು ತಾನಾದಡೆ ತಾನಾಗಿ ಕಂಡಡೆ ಅದೆ ಭಂಗ.

ಅರಿಯಲಿಲ್ಲದ ಅರುವೆ ತಾನಾಗಿಹ ತನ್ನ ಮಹಾಘನದಿರುವಿನಲ್ಲಿ ಅರಿವ ಅರುಹಿಸಿಕೊಂಬ ಈ ಉಭಯಂಗಳು. ''ಆದುದನರಿಯೆ, ಹೋದುದನರಿಯೆ, ಬಂದುದ ನರಿಯೆ, ನಿಂದುದ ನರಿಯೆ, ಒಳಗ ನರಿಯೆ, ಹೊರಗ ನರಿಯೆ, ಭಾವವ ನರಿಯೆ, ನಿರ್ಭಾವವವರಿಯೆ, ಶೂನ್ಯವ ನರಿಯೆ, ನಿಶೂನ್ಯವ ನರಿಯೆ, ಕೂಡಲಸಂಗಮದೇವಾ ನಾನೇನೊಂದು ಅರಿಯೆನಯ್ಯ ''

ಮಹಾಲಿಂಗೈಕ್ಯಾನುಭಾವಿ ಶರಣ ಅರುಹಿಸಿಕೊಂಬ ನಾಮರೂಪವ ಹುಸಿಯಾಗಿ ಕಂಡ. ಬಂಜೆ ಮಗನಾಗಿ ಕಂಡ.

[2] ಬಂಜಿಮಗ [2] ಆದುದ ನರಿಯೆ, ಹೋದುದ ನರಿಯೆ, ಹಾಗೆ ದೃಶ್ಯರೂಪ ಪಿಂಡಾಂಡವಾಗಲಿ, ಬ್ರಹ್ಮಾಂಡವಾಗಲಿ ಬಂಜಿಮಗನಂತೆ ಆದುದನರಿಯೆ, ಹೋದುದನರಿಯೆ,

ಮಾನವನಾಗಿ ಬಂದುದ ಅರಿಯೆ, ದಾನವನಾಗಿ ಬಂದುದ ಅರಿಯೆ, ನಿಂದುದನರಿಯೆ, ಭಾವವನರಿಯೆ, ತಂದೆ ತಾಯಿಯೆಂಬ ಭಾವವನರಿಯೆ ಗಂಡು ಹೆಣ್ಣೆಂಬ ಭಾವವನರಿಯೆ, ಗಂಡ ಹೆಂಡಿರೆಂಬ ಅಣ್ಣ ತಮ್ಮಿಂದರೆಂಬ ಮಕ್ಕಳು ಮಕ್ಕಳ ಮರಿಗಳೆಂಬ ಭಾವವನರಿಯೆ ಬಡವ ಬಲ್ಲಿದರೆಂಬ ಭಾವವನರಿಯೆ, ಅಹುದೆಂಬುದನರಿಯೆ, ಅಲ್ಲೆಂಬುದುನರಿಯೆ, ಧರ್ಮವನರಿಯೆ, ಅಧರ್ಮವನರಿಯೆ, ಪುಣ್ಯವನರಿಯೆ, ಪಾಪವನರಿಯೆ, ಮರವು ಅರಿಯೆ, ಅರುವೆಂಬುದ ಅರಿಯೆ, ಅರುಹಿಸಿಕೊಂಬುದೆಂದು ಅರಿಯೆ, ಅರಿವದೆಂಬುದ ಅರಿಯೆ, ಅಂತರ್ಮುಖವನರಿಯೆ, ಬಹಿರ್ಮುಖವ ನರಿಯೆ, ಒಳಗನರಿಯೆ, ಹೊರಗನರಿಯೆ, ಸಂಗ ನರಿಯೆ, ನಿಸ್ಸಂಗ ನರಿಯೆ, ಜೀವ ನರಿಯೆ, ಪರಮನೆಂಬುದ ನರಿಯೆ, ಅರಿಯನೆಂಬುದ ಅರಿಯೆ, ಅರಿತೆನೆಂಬುದ ಅರಿಯೆ, ನಾಹಂ ಅರಿಯೆ, ಕೋಹಂ ಅರಿಯೆ, ಸೋಹಂ ಅರಿಯೆ, ಚಿದಹಂ ಅರಿಯೆ, ತೋರುವ ಅಖಿಲ ಮಾಯಾಮಯ ತತ್ವ ಅತತ್ವ ವಿವೇಕವ ಅರಿಯೆ, ಅರಿವ ಅರುಹಿಸಿಕೊಂಬ ಇವೆರಡು ಹುಸಿಯಾ ದುದು ಕಂಡು ಗುರುವೆಂಬುದು ಅರಿಯೆ, ಶಿಷ್ಯರೆಂಬುದ ಅರಿಯೆ, ಬೋಧವರಿಯೆ, ಅಬೋಧವರಿಯೆ, ಬೋಧಾಬೋಧಾ ಮಿಶ್ರವು ಅರಿಯನಾಗಿ ಅರಿಯಲಿಲ್ಲದ ಅರುವೆ ತಾನಾಗಿ ನಿರಂತರವಿದ್ದುದರಿಂದ ಪೂರ್ವಾರ್ಜಿತವೆಂಬುದು ಪುಸಿಯಾಯಿತ್ತು. ಈ ಪುಶಿಯೆ ಸತ್ಯವಾಗಿ ಕಂಡ ವಂಗೆ ಪೂರ್ವಾರ್ಜಿತ ಕಂಡಡೆ ಅದು ಭಂಗವೆಂದು ಹೇಳಿಹರು.

**ಹರ ಶರಣೆಂದು ಭವ ಮಾಲೆಗೆ ಒಳಗಾದಡೆ ಭಂಗ :** ಹರ ತತ್ವಕ್ಕೆ ಶರಣೆಂದು ಒಪ್ಪಿ ಪುನಃ ಇಲ್ಲದ ಹುಟ್ಟು ಸಾವುಗಳ ಕಂಡು ಭಯವಂತ ನಾದಡೆ ಅದು ಭಂಗ. ಹರ ಆರು ? ಹರ ಸ್ವರೂಪ ವಾವುದು ? ''ಹರ ತನ್ನ ರೂಪ ತೋರಬೇಕೆಂದು ಗುರು ರೂಪಾಗಿ ಬಂದು ಮನ ಸ್ಥಲಕ್ಕೆ ಮಂತ್ರವಾದ, ತನು ಸ್ಥಲಕ್ಕೆ ಪ್ರಸಾದಿಯಾದ, ಕರಸ್ಥಲಕ್ಕೆ ಲಿಂಗವಾದ, ಇಂತೀ ತ್ರಿವಿಧ ದಲ್ಲಿ ತ್ರಿವಿಧ ಸಾಹಿತ್ಯ ವಾದನಯ್ಯ ಕೂಡಲಸಂಗಯ್ಯನಲ್ಲಿ ಬಸವಣ್ಣನು ''

ಹರನೆ ತನ್ನ ತೋರಬೇಕೆಂದು ಗುರು ರೂಪಾಗಿ ಬಂದು ಅರಿಯಲಿಲ್ಲದ ಅರುವ ನರುಹಿಸಿ ಮನಸ್ಥಲಕ್ಕೆ ಮಂತ್ರವಾದುದ ತೋರಿದ, ತನು ಸ್ಥಲಕ್ಕೆ ಪ್ರಸಾದವಾದುದ ತೋರಿದ, ಕರಸ್ಥಲಕ್ಕೆ ಲಿಂಗವಾದುದ ತೋರಿದ, ತೋರಿ ತೋರಬಾರದ ಘನವಾಗಿಹ ತನ್ನ ತೋರಿ ತನ್ನಂತೆ ಮಾಡಿದುದ ರಿಂದ ತ್ರಿವಿಧದಲ್ಲಿ ತ್ರಿವಿಧ ಸಾಹಿತ್ಯವಾಗಿ ಓದಲಿಲ್ಲ, ಓದಲಿಲ್ಲಾಗ್ಗಿ ಕೇಳಲಿಲ್ಲ, ಕೇಳಲಿಲ್ಲಾಗ್ಗಿ ಹೇಳ ಲಿಲ್ಲ, ಹೇಳಲಿಲ್ಲಾಗ್ಗಿ ಅರಿಯಲಿಲ್ಲ, ಅರಿಯಲಿಲ್ಲದ ಅರುವೆ ತಾನಾಗಿ ಮನ ಸ್ಥಲಕ್ಕೆ ಮಂತ್ರವಾದ ವ ತಾನೆ, ತನು ಸ್ಥಲಕ್ಕೆ ಪ್ರಸಾದಿಯಾದವ ತಾನೆ, ಕರಸ್ಥಲಕ್ಕೆ ಲಿಂಗವಾದವ ತಾನೆ.

ಆ ಅರಿಯಲಿಲ್ಲದ ಅರುವೆ ಹರ ರೂಪ, ಗುರು ರೂಪ, ಶಿವ ರೂಪ, ಜಂಗಮ ರೂಪ, ಪ್ರಸಾದ ರೂಪ, ತನ್ನ ರೂಪ, ಸ್ವಸ್ವರೂಪ ಒಂದೆ ನೋಡಾ. ಅಂತಪ್ಪ ಸ್ವಯಂ ಜ್ಯೋತಿ ಅರುವು ಅರಿ ಯಲಿಲ್ಲದ ಅರುವು. ಅರುವಿಂಗರುವು ತಾನೆಂದರಿತ ಶರಣ ಹುಸಿಯಾಗಿಹ ನಾಮ ರೂಪವ ಸತ್ಯವ ಮಾಡಿ ದೇಹ ಬುದ್ಧಿ, ದೇಹ ಭಾವ, ದೇಹಾಭಿಮಾನಕ್ಕೆ ಒಳಗಾದಡೆ ಭವ ಮಾಲೆಗೆ ಒಳಗಾಗು ವುದರಿಂದ ಅದು ಭಂಗವೆಂದು ಹೇಳಿಹರು.

**[3] ಹರವಶ [3] ವೆನಿಸಿ [4]ವಿಧಿವಶ [4] ವೆನಿಸಿದಡೆ ಅದು ನಿಮಗೆ ಭಂಗ ಕಾಣಾ ಶಂಭುಜಕ್ಕೇಶ್ವರ :** ಹರವಶ ವೆನಿಸಿದವರು ಶರಣ ಶರಣೆಯರು. ಅವರು ಹಣೆಬರಹ ವೆಂದೆನಿಸಿದ ಪ್ರಾರಬ್ಧವ ಕಾಣದವರು. ಅರಿಯಲಿಲ್ಲದ ಅರುವಿನ ವಶವಾದವರು. ಅರುಹಿಸಿಕೊಂಬ ಅರಿವ ಅರಿ

ಯದಂತಿದ್ದುದರಿಂದ ವಿಧಿ ವಶ ಕಾಣದವರು. ನಿರಂತರ ಮಂಗಲಮಯ ಬೆಳಗಿಂಗೆ ಬೆಳಗಾಗಿಹ ಸ್ವಯಂಜ್ಯೋತಿ ಲಿಂಗವಾಗಿ ತಮ್ಮ ಸ್ವಸುಖದಲ್ಲಿದ್ದವರು.

ಕರುಣಾಜಲವೆಂಬ ಗುರುಪಾದೋದಕವಾಗಿಹ ಅರಿಯಲಿಲ್ಲದ ಅರುವರಿತು ಅರಿಯ ದಂತಿದ್ದ ಸ್ವಾನುಭವಿಗಳು. ವಿನಯ ಜಲವೆಂಬ ಲಿಂಗ ಪಾದೋದಕದಿಂದ ನಿಃಶಬ್ದ ಲಿಂಗಾನುಭವಿ ಗಳು. ಸಮತಾ ಜಲವೆಂಬ ಜಂಗಮ ಪಾದೋದಕದಿಂದ ಮುಗ್ಧಾನು ಭಾವಿಯಾಗಿಹ ನಿರಂಕುಶ ತೃಪ್ತಿಯಲ್ಲಿ ತೃಪ್ತರು. ಇಂತಪ್ಪ ತ್ರಿವಿಧ ಘನ ಚೈತನ್ಯ ಮಹಾನುಭವಿರೂಪಿ ಜ್ಞಾನೋದಕದಿಂದ ಗುರು ಲಿಂಗ ಉದಯವಾಗಿ, ವಿಧಿವಶವೆಂಬ ಸಂಚಿತ ಕರ್ಮ ನಷ್ಟವಾಯಿತ್ತು.

ವಿನಯ ಜಲವೆಂಬ ತೆರಹಿಲ್ಲದ ಲಿಂಗವೆಂಬುದು ಭರಿತವು. ಅಂತಪ್ಪ ಘನಲಿಂಗ ಅರಿದ ರಿದು ಸ್ವಯಂಜ್ಯೋತಿ ಲಿಂಗವೆ ತನ್ನಿರುವು ತಾನಾಗಿಹುದರಿಂದ ವಿಧಿವಶವೆಂಬ ಪ್ರಾರಬ್ಧ ನಷ್ಟವಾ ಯಿತ್ತು.

ಇತ್ತ ಸಮತಾಜಲವೆಂಬ ನಿರ್ಮಾಯ ಜಂಗಮ ಪಾದೋದಕದಿಂದ ನಿರಾಲಂಬತ್ವ ಸಿದ್ಧ ವಾಗಿ ವಿಧಿ ವಶವೆಂಬ ಆಗಾಮಿ ಕರ್ಮನಾಶವಾಯಿತ್ತು. ಇಂತಪ್ಪ ಪರಮ ರಹಸ್ಯವ ತಿಳಿಯದೆ ಹರವಶವೆನಿಸಿಕೊಂಬ ಅಜ್ಞಾನಿಗಳೆ ವಿಧಿವಶರಾಗಿ ಭವ ಭವಾಂತರದಲ್ಲಿ ಬರುತಿರ್ಪರೆಂದು ಹೇಳಿಹರು.



1.ಶಬ್ದವನ್ನು ಜ್ಞಾನದಿಂದ ಸ್ವೀಕರಿಸುವವರು, ನಿಶಬ್ದವೇದಿಗಳು, ಜ್ಞಾನದಲ್ಲಿ ಲೀನವಾದವರು, 2.ಮನ, 3.ಜ್ಞಾನವಶ, 4.ಅಜ್ಞಾನವಶ

# 'ಜ್ಞಾನ' ದೇವನಾದ ಬಗೆ

**ಆದಿಯಲ್ಲಿ ದೇವಾ, ನಿಮ್ಮನಾರು ಬಲ್ಲರು ?**
**ವೇದಂಗಳು ಮುನ್ನಲತ್ತತ್ತಲರಿಯವು.**
**ವೇದಿಗಳು ಪರಬ್ರಹ್ಮವೆಂದೆಂಬರು.**
**ನಾದ ಬಿಂದು ಕಳಾತೀತ ನೆಂದೆಂಬರು.**
**ಸಾಧು ಸಜ್ಜನ ಸದ್ಭ ಕ್ತರಿಚ್ಚೆಗೆ ಬಂದೆಯಾಗಿ, ಈಗೀಗ ದೇವನಾದೆ ಶಂಭುಜಕ್ಕೇಶ್ವರಾ**

**ತಾತ್ಪರ್ಯ : ಆದಿಯಲ್ಲಿ ದೇವಾ ನಿಮ್ಮನಾರು ಬಲ್ಲರು :**
ಪೂರ್ವದಲ್ಲಿ ದೇವಾ ನಿಮ್ಮನಾರು ಬಲ್ಲರು: ''ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೆ ಒಂದು ದಿನವಾಯಿತ್ತು, ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ಹಲವು ರುದ್ರವತಾರ ವಳಿದಲ್ಲಿ ಕೂಡಲಸಂಗಮದೇವನೇನೆಂದು ಅರಿಯನು.'' ಆದಿಯಲ್ಲಿ ದೇವಾ, ಆರುಕೋಟಿ ಬ್ರಹ್ಮರು ಹುಟ್ಟಿ ಎಷ್ಟೋ ವರ್ಷಗಳು ಆದರೂ [1] ನಿಮ್ಮನ್ನಾರು [1] ತಿಳಿದರು ?

ಆರುಕೋಟಿ ಬ್ರಹ್ಮರಲ್ಲಿ ಒಂದು ಕೋಟಿ ಬ್ರಹ್ಮರುಗಳಾದರೂ ತಿಳಿದರೆ ? ಕೊನೆಗೆ ಲಕ್ಷದಷ್ಟು ಬ್ರಹ್ಮರಾಗಲಿ ಅಥವಾ ಸಾವಿರಾರು ಬ್ರಹ್ಮರಾಗಲಿ ಇಲ್ಲವೆ ನೂರಾರು ಬ್ರಹ್ಮರಾದರೂ ದೇವಾ ನಿಮ್ಮನು ತಿಳಿದರೆ ?

ನಾರಾಯಣರೊಂದು ಕೋಟಿಯಲ್ಲಿ ಒಂದು ಲಕ್ಷ ನಾರಾಯಣರಾದರೂ ದೇವಾ ನಿಮ್ಮ ನಾರು ತಿಳಿದರು ? ಕೊನೆಗೆ ಹತ್ತು ಸಾವಿರ, ಒಂದು ಸಾವಿರ ನಾರಾಯಣರಾದರೂ ; ದೇವಾ ನಿಮ್ಮನಾರು ತಿಳಿದರು. ಒಂದು ಸಾವಿರ ನಾರಾಯಣರಲ್ಲಿ ನೂರಾರು ನಾರಾಯಣರುಗಳಿಗಾಗಲಿ ಸಾಧು ಸಜ್ಜನ ಸದ್ಭ ಕ್ತರಾಗ್ಗಲು ಅವರಿಗೆ ಒಪ್ಪಿಗೆ ಇಲ್ಲವಾಯಿತ್ತೆ. ಇವರ ನಾರಾಯಣತ್ವ ದೇವನಲ್ಲಿ ಸದ್ಭ ಕ್ತಿ ಸದಿಚ್ಚೆ ಬಾರದ್ದರಿಂದ ನಿಮ್ಮನಾರು ತಿಳಿದರು? ಹಲವು ರುದ್ರಾವತಾರವಾದರೂ, ಒಂದು ಅವತಾರದಲ್ಲಿಯಾದರೂ, ದೇವಾ ! ಸಾಧು ಸಜ್ಜನ ಸದ್ಭಕ್ತರಾಗದ್ದರಿಂದ ಇವರುಗಳು ಕೂಡಾ ನಿಮ್ಮನಾರು ತಿಳಿದರು ? ಇದು ಕಾರಣ ಆರು ಕೋಟಿ ಬ್ರಹ್ಮರಿಗೂ, ಒಂದು ಕೋಟಿ ನಾರಾಯಣ ರಿಗೂ, ಹಲವು ರುದ್ರಾವತಾರಕ್ಕೂ ತಮ್ಮ ತಮ್ಮ ಅಧಿಕಾರ ಫಲ ಪದಂಗಳೆ ಘನವಾಗಿ; ಬ್ರಹ್ಮರುಗಳಿಗೆ ಬ್ರಹ್ಮನೆಂಬ ಅಹಂಕಾರ, ನಾರಾಯಣನಿಗೆ ನಾರಾಯಣನೆಂಬ ಅಹಂಕಾರ, ರುದ್ರರಿಗೆ ರುದ್ರರೆಂಬ ಅಹಂಕಾರವೆ ಗಟ್ಟಿಗೊಂಡು, ಏನೆಂದೆನ್ನದ ಮುನ್ನಲಾದ [2] ಮಹಾಘನ [2] ತಿಳಿಯದಾದರು.

**ವೇದಂಗಳು ಮುನ್ನಲತ್ತತ್ತಲರಿಯವು :**

ವೇದಂಗಳು ಕೂಡಾ ವೇದಂಗಳ ಮುನ್ನ ಅತ್ತತ್ತ ಅರಿಯವು ; ವೇದಗಳು ಜೀವನವನ್ನು ಕುರಿತು ಹೇಳಿದವಲ್ಲದೆ ಏನೆಂದೆನ್ನದ ಮುನ್ನ ತಾನೆ ಆದ ಮಹಾಘನವೆ ತಿಳಿಯಲಿಲ್ಲ, ವೇದಂಗಳು ಕರ್ಮ ಜ್ಞಾನ, ಉಪಾಸನೆಯ ಜ್ಞಾನ, ಜ್ಞಾನ ಕಾಂಡದ ಜ್ಞಾನ ಈ ಮೂರು ದೋಷ ನಿವೃತ್ತಿ ಮಾಡುವ ಲೋಸುಗ ಹೇಳಿದವು.

ಜೀವನು ಪರಬ್ರಹ್ಮವಾಗಿದ್ದರೂ ಮಲತ್ರಯ ದೋಷಗಳ ಕಾರಣದಿಂದ ಜೀವನೆನಿಸಿ ಕೊಂಡನು. ಆ ತ್ರಿವಿಧ ದೋಷದ ನಿವೃತ್ತಿ ನಿಮಿತ್ಯ ಮಾಡಿಕೊಂಡ ವೇದಗಳು, ಮಲ ವಿಕ್ಷೇಪ ಆವರಣ ಈ ಮೂರು ದೋಷಗಳು ಅಂಟಿ ಜೀವನು ರಾಗದ್ವೇಷಿಯಾದ, ಚಂಚಲವುಳ್ಳವನಾದ , ಆವರಣವುಳ್ಳವನಾದ. ಈ ದೋಷವ ಕಳೆಯಲು ವೇದಂಗಳು ಮೂರು ಜ್ಞಾನವ ಸೂಚಿಸುವದಾ ಗಿದೆ.

ರಾಗದ್ವೇಷವೆಂಬ ಪಾಪಕೂಪ ಮಲದೋಷ ಕಳೆಯಲು ಕರ್ಮಕಾಂಡ ಜ್ಞಾನವನ್ನು ತಿಳಿಸುವದಾಗಿದೆ. ಚಂಚಲವೆಂಬ ಮನದ ದೋಷವ ಕಳೆಯಲು ಉಪಾಸನೆಯ ಜ್ಞಾನವನ್ನು ಬೋಧಿಸುವದಾಗಿದೆ. ಆವರಣವೆಂಬ ದೋಷವ ಕಳೆಯಲು ಜ್ಞಾನಕಾಂಡವೆಂಬ ಜ್ಞಾನವ ಬೋಧಿಸುವದಾಗಿದೆ.

ವೇದಗಳಲ್ಲಿ ದೊರೆಯುವ ಜ್ಞಾನಂಗಳು ಈ ಮೂರು ತರಹದ ಜ್ಞಾನಂಗಳು ಲಭ್ಯವಾಗು ವವು. ವೇದಂಗಳ ಮುನ್ನಲತ್ತತ್ತ ಇದ್ದ ದೇವನ ಜ್ಞಾನವನ್ನು ವೇದಂಗಳು ತಿಳಿಸವು. ಕಾರಣ '' ಏನೆ ಂದೆನ್ನದ ಮುನ್ನ ತಾನೆ ಆದ ಮಹದರುವು ತೆರಹಿಲ್ಲದಭವ ನುಡಿಗೆಡೆಗೊಡನು '' ಎಂಬ ವಿಷಯ ಅಲ್ಲಿ ದೊರೆಯದ್ದರಿಂದ ವೇದಂಗಳು ಮುನ್ನಲತ್ತತ್ತಲರಿಯವು ಎಂದು ಹೇಳಿಹಳು.

ವೇದಿಗಳು ಪರಬ್ರಹ್ಮವೆಂದೆಂಬರು :

ವೇದವನೋದಿದ ವೇದವೇತ್ತ ವೇದಿಗಳು ಪರಬ್ರಹ್ಮವೆಂದು ದೇವನಿಗೆ ನುಡಿದರು. ಅವರು ಕೂಡಾ ನುಡಿಗೊಳಪಡಿಸಿದುದನ್ನೆ ಸೂಚಿಸಿದರಲ್ಲದೆ ಏನೆಂದೆನ್ನದ ಮುನ್ನ ತಾನೆ ಆದ ಮಹದಿರುವ ತಿಳಿಯಲಿಲ್ಲ . ಇದನ್ನು ಕಂಡೆ '' ಸಾಧು ಸಜ್ಜನ ಸದ್ಭಕ್ತರಿಚ್ಚೆಗೆ ಬಂದು ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯ '' ಎಂದು ಶರಣರು ನುಡಿದರು. ಇದಲ್ಲದೆ ತೆರಹಿಲ್ಲದ ಲಿಂಗ ಭರಿತವೆಂದು, ಶಬ್ದ ಮುಗ್ಧನೆಂದು ನಿರಾಳ ನಿರಾಲಂಬನೆಂದು ಶರಣರು ಸೂಚಿಸಿದರು. ಇತ್ತ ಶರಣೆ ಯರು ತೆರಹಿಲ್ಲದಭವ ನುಡಿಗೆಡೆಗೊಡನು ಎಂಬುದು ಇವರು ಕೂಡಾ ತಿಳಿಯಲಿಲ್ಲವಲ್ಲವೆಂದು ಕಳಕಳಿಯಿಂದ ಹೇಳಿಹರು.

ಸಾಧು ಸಜ್ಜನ ಸದ್ಭಕ್ತರಿಚ್ಚೆಗೆ ಬಂದೆಯಾಗಿ ಈಗೀಗ ದೇವನಾದೆ ಶಂಭುಜಕ್ಕೇಶ್ವರಾ :

ಸಾಧು ಸಜ್ಜನ ಸದ್ಭ ಕ್ತರು ಇವರು '' ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪ ಹುಸಿ ಎಂತು ಜನಸಿತೆಂದರಿಯೆನಯ್ಯ. ಇಲ್ಲದ ಹೆಸರುಳ್ಳ ಚಿತ್ತಾರದಂತೆ ದೇಹ ನಾಮವೀತೆರನೆಂದ ರಿಯದೆ ತೊಳಲಿ ಬಳಲುತಿದ್ದೆನಯ್ಯ ಕೂಡಲ ಚೆನ್ನಸಂಗ ಸಂಸಾರ ಬಂಧನವೆನಗಿದೆ ಕಂಡಯ್ಯ. ''

ಸಾಧುಗಳಾಗಲಿ ಸಜ್ಜನರಾಗಲಿ ಸದ್ಭ ಕ್ತರುಗಳಾಗಲಿ ಅಸ್ತಿ ಭಾತಿ ಎಂಬ ಎನ್ನ ಸತ್ಯವದು ಅರಿ ಯಬಾರದ ಘನ. ಅದುವೆ ಅರಿಯಲಿಲ್ಲದ ಅರುವು. ತೆರಹಿಲ್ಲದಭವ ನುಡಿಗೆಡೆಗೊಡನು ಎಂಬ ಎನ್ನ ಸತ್ಯದಲ್ಲಿ ನಾಮ ರೂಪ ಹುಸಿ ಹೇಗೆ ಹುಟ್ಟಿತ್ತೆಂದು ತಿಳಿಯೆನಯ್ಯ.

ಇದು ಇಲ್ಲದ ಹೆಸರುಳ್ಳ ಚಿತ್ತಾರದಂತೆ ದೇಹ ನಾಮ ರೂಪವೀ ತೆರನೆಂದರಿಯದೆ ತೊಳ ಲುವದು ಬಳಲುವುದು ಬಂದಿದೆ ಎಂಬುದು ಕಂಡುಕೊಂಡು ; ದೇಹ ನಾಮ ರೂಪವದು ಆದುದನರಿಯೆ ಹೋದುದನರಿಯೆ ಬಂದುದನರಿಯೆ ನಿಂದುದನರಿಯೆ ಒಳಗನರಿಯೆಹೊರಗನರಿಯೆ ಭಾವವ ನರಿಯೆ ನಿರ್ಭಾವವನರಿಯೆ ಶೂನ್ಯವನರಿಯೆ ನಿಶೂ ನ್ಯವನರಿಯೆ ಕೂಡಲಸಂಗಮದೇವಾ ನಾನೇನೊಂದು ಅರಿಯೆನು.

ತಮ್ಮ ಅಸ್ತಿ ಭಾತಿ ಎಂಬ ಎನ್ನ ಸತ್ಯ ಅದು ತೆರಹಿಲ್ಲದಭವ ನುಡಿಗೆಡೆಗೊಡದಲ್ಲಿ ನಿಂದು ಈ ನಾಮ ರೂಪ ಹುಸಿ ಆದುದ ತಿಳಿಯಲಿಲ್ಲ, ಇದು ಸತ್ತುದು ತಿಳಿಯಲಿಲ್ಲ, ಹುಟ್ಟಿಬಂದುದು ತಿಳಿಯಲಿಲ್ಲ, ಬದುಕಿನಿಂದುದು ತಿಳಿಯಲಿಲ್ಲ, ಒಳಗೂ ತಿಳಿಯಲಿಲ್ಲ, ಹೊರಗೂ ತಿಳಿಯಲಿಲ್ಲ, ಇದರ ಭಾವವು ತಿಳಿಯಲಿಲ್ಲ, ನಿರ್ಭಾವವು ತಿಳಿಯಲಿಲ್ಲ. ಇದು ಇಲ್ಲದುದು ಎಂದು ತಿಳಿಯಲಿಲ್ಲ, ಇಲ್ಲದುದು ಇಲ್ಲವೆಂದು ತಿಳಿಯಲಿಲ್ಲ.

ದೇಹ ನಾಮ ರೂಪ ಹುಸಿ. ಹುಸಿ ಜನಿಸಿದ್ದು, ಅದು ಹೇಗೆ ತಿಳಿಯುವದು ? ದೇಹ ನಾಮ ರೂಪ ವಿಷಯ ಸತ್ಯವೆಂದರೂ ತಿಳಿಯಲಿಲ್ಲ, ಅದು ಮಿಥ್ಯವೆಂದರೂ ತಿಳಿಯಲಿಲ್ಲ, ಹುಸಿ ಮೊದಲೆ ಹುಸಿ. ಮೊಲದ ಕೋಡು ಮೊದಲೆ ಹುಸಿ. ನುಡಿಯಲ್ಲಿ ಕಂಡಿತ್ತಲ್ಲದೆ ಅರಿದರಿದಲ್ಲಿ ನುಡಿಯು ಹುಸಿಯಾದಂತೆ ದೇಹ ನಾಮ ರೂಪವೆಂಬ ನುಡಿ ಹುಸಿಯಾದುದು.

ತನಗದು ತಿಳಿದಲ್ಲಿ ಏನೆಂದೆನ್ನದ ಮುನ್ನ ತಾನೆ ಆದುದು. ಇದ್ದಂತಿದ್ದ ನಿರಂತರ ಮಂಗಳ ಮಯ ಅಭೇದ್ಯ ಸತ್ಯ ತಾನೆ. ಆಗ ಕಾಯವಿಲ್ಲದ ಭಕ್ತ, ಜೀವವಿಲ್ಲದ ಭಕ್ತ, ಮರಹಿಲ್ಲದ ಭಕ್ತ, ಅರುವಿಲ್ಲದ ಭಕ್ತ, ಒಳಗಿಲ್ಲದ ಭಕ್ತ , ಹೊರಗಿಲ್ಲದ ಭಕ್ತ , ತಾನಿಲ್ಲದ ಭಕ್ತ , ಇದಿರಿಲ್ಲದ ಭಕ್ತ , ತಾನಿದಿರೆಂಬುದೇನೇನೂ ಇಲ್ಲದ ಪರಮರಲ್ಲಿ ಬೆರಸಿ ಬೇರಿಲ್ಲದ ಪರಮ ಭಕ್ತರಿಚ್ಚೆಗೆ ಬಂದೆಯಾಗಿ ಈಗೀಗ ದೇವನಾದೆ ಎಂದು ಹೇಳಿಹಳು.

ಓಹೋ ! ಸಾಧು ಸಜ್ಜನ ಸದ್ಭಕ್ತರ ಇಚ್ಚೆಗೆ ಬಂದೆಯಾಗಿ ಈಗೀಗ ದೇವನಾದೆಯಾ ? ಅಂದು ದೇವನೆ ಇಂದು ದೇವನೆ ಎಂದೆಂದು ದೇವನಾದರೂ ನಿನ್ನ ತಿಳಿಯುವ ಭಾಗ್ಯ ಇಲ್ಲದಾಯಿತೆ ? ಸಾಧುಸಜ್ಜನ ಸದ್ಭಕ್ತರಿಚ್ಚೆಗೆ ಬಂದೆಯಾಗಿ, ಈಗೀಗ ದೇವನಾದುದು ಸಾಧು ಸಜ್ಜನ ಸದ್ಭಕ್ತರ ಹೃದಯಕ್ಕೆ ವೇದ್ಯವಾಯಿತ್ತು ಎಂದು ಹೇಳಿಹರು.



1.ಜ್ಞಾನವನ್ನು 2. ಮಹಾಜ್ಞಾನ

# ಜ್ಞಾನಕ್ಕೆ ತವಕವಿಲ್ಲ ಮನಕ್ಕೆ ತಾಳ್ಮೆಯಿಲ್ಲ

**ಇನಿಯಂಗೆ ತವಕವಿಲ್ಲ ;ಎನಗೆ ಸೈರಣೆಯಿಲ್ಲ.**
**ಮನದಿಚ್ಛೆಯನರಿವ ಸಖಿಯರಿಲ್ಲ, ಇನ್ನೇವೆನವ್ವಾ**
**ಮನಮಥನ ವೈರಿಯ ಅನುಭಾವದಲ್ಲಿ**
**ಎನ್ನ ಮನ ಸಿಲುಕಿ ಬಿಡದು, ಇನ್ನೇನು ಮಾಡುವೆನೆಲೆ**
**ಕರುಣವಿಲ್ಲದ ತಾಯೆ ? ದಿನ ವೃಥಾ ಹೋಯಿತ್ತಾಗಿ ,**
**ಯೌವ್ವನ ಬೀಸರವಾಗದ ಮುನ್ನ ಪಿನಾಕಿಯ ನೆನಹವ್ವಾ ಶಂಭುಜಕ್ಕೇಶ್ವರಾ.**

**ತಾತ್ಪರ್ಯ : ಇನಿಯಂಗೆ ತವಕವಿಲ್ಲ ಎನಗೆ ಸೈರಣೆಯಿಲ್ಲ ;**

[1] ಗಂಡಂಗೆ [1] ಆತುರವಿಲ್ಲ ಎನಗೆ ಸೈರಣೆಯಿಲ್ಲ; ಆತುರವಿಲ್ಲದ ಗಂಡ ಇವನಾರು ? '' ಸಾವಿಲ್ಲದ ಕೇಡಿಲ್ಲದ , ರೂಹಿಲ್ಲದ ಚೆಲುವಂಗೆ , ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ ನಾನೊಲಿದೆನವ್ವಾ. ಚೆನ್ನಮಲ್ಲಿಕಾರ್ಜುನ ಗಂಡನೆನಗೆ, ಮಿಕ್ಕಿದ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ.''

ಗಂಡನೆಂದರೆ ಸಾವಿಲ್ಲದ ಗಂಡನೆ ನಿಜವಾದ ಗಂಡ, ಕೇಡಿಲ್ಲದ ಗಂಡನೆ ನಿಜವಾದ ಗಂಡ. ರೂಪಿಲ್ಲದ ಗಂಡ ಭವವಿಲ್ಲದ ಗಂಡನೆ ಗಂಡ. ತೆರಹಿಲ್ಲದಭವನಾಗಿಹ ಗಂಡ ನುಡಿಗೆಡೆಗೊಡದ ಘನವೆ ನಿಜವಾದ ಗಂಡ; ಪಂಚೇಂದ್ರಿಯಂಗಳ ಭಯವಿಲ್ಲದವನೆ ಗಂಡ. ಇವುಗಳ ಶುಭಾಶುಭ ಕ್ರಿಯಂಗಳಿಗೆ ಮೀರಿದವನೆ ಗಂಡ, ಶುಭ ಕ್ರಿಯಗಳ ಕಂಡು ಹಿಗ್ಗದ ಗಂಡ, ಅಶುಭ ಕ್ರಿಯೆಗಳ ಕಂಡು ಕುಗ್ಗದ ಗಂಡ, ಅತೀಂದ್ರಿಯನಾಗಿಹ ಗಂಡ, ಇವನೆ ನಿರ್ಭಯ ಚೆಲುವಿನ ಒಡಲಳಿದ ಗಂಡ. ತನು ನಷ್ಟ ಮಾಡಿದ ಗಂಡ. ಮನ ನಷ್ಟ ಮಾಡಿದ ಗಂಡ. ನೆನಹು ನಷ್ಟ ಮಾಡಿದವನೆ ಗಂಡ. ಭಾವ ನಷ್ಟ ಮಾಡಿದವನೆ ಗಂಡ. ಜ್ಞಾನ ನಷ್ಟ ಮಾಡಿದವನೆ ಗಂಡ. ನಾ ನೀ ನೆಂಬುದ ನಷ್ಟ ಮಾಡಿ ತೆರಹಿಲ್ಲದಭವನಾಗಿಹ ಗಂಡನೆ ನಿಜವಾದ ಗಂಡ. ಚೆನ್ನಮಲ್ಲಿಕಾರ್ಜುನಯ್ಯನೆ ನಿಜವಾದ ಗಂಡ. ಉಳಿದ ಲೋಕದ ಗಂಡರ ಸಂಬಂಧ ಎನಗೆ ಇಲ್ಲವಯ್ಯ.

'' ಅಯ್ಯ ಅರಸಿ ತೊಳಲಿದರಿಲ್ಲ , ಹರಸಿ ಬಳಲಿದರಿಲ್ಲ , ಬಯಸಿ ಹೊಕ್ಕರಿಲ್ಲ , ಅದು ತನ್ನ ಅಹಕಾಲಕ್ಕಲ್ಲದೆ ಸಾಧ್ಯವಾಗದು ; ಶಿವನೊಲಿದಲ್ಲದೆ ಕೈಗೂಡದು. ಚೆನ್ನಮಲ್ಲಿಕಾರ್ಜುನ ನೆನೆಗೊಲಿದನಾಗಿ ನಾನು ಸಂಗನ ಬಸವಣ್ಣನ ಪಾದವ ಕಂಡು ಧನ್ಯಳಾದೆನು. ''

ಎನ್ನ ಗಂಡನ ಕೂಡುವ ತವಕದಿಂದ ಎಲ್ಲೆಲ್ಲೂ ಹುಡುಕಿದರಿಲ್ಲ , ಹರಿಸಿದರಿಲ್ಲ , ಗಿರಿ ಗುಹೆಗಳಲ್ಲಿ ಬಯಸಿ ಹೊಕ್ಕರಿಲ್ಲ . ಅದು ತಾನಾಗಿಯೆ ಪಕ್ವವಾದಾಗ ಸಾಧ್ಯವಾಗುವುದು. ಶಿವನೊಲಿದಾಗ ಕೈಗೂಡುವುದು. ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ, ಭವವಿಲ್ಲದ, ಚೆನ್ನಮಲ್ಲಿಕಾರ್ಜುನನನೆಗೊಲಿದಾಗ ಸಾಧ್ಯವು. ಎನ್ನ ಗಂಡನ ''ಅರಿದಿಹೆನೆಂದಡೆ ಅರಿಯಬಾರದು ನೋಡಾ. ಘನಕ್ಕೆ ಘನ ತಾನೆ ನೋಡಾ ಚೆನ್ನಮಲ್ಲಿಕಾರ್ಜುನ ನಿರ್ಣಯವಿಲ್ಲದೆ ಸೋತೆನು'' ಇಂತಪ್ಪ ಗಂಡನ ಕೂಡುವ ತನಕ ಎನಗೆ ಸೈರಣೆ ಇಲ್ಲ ನೋಡವ್ವಾ ಎಂದು ಹೇಳಿಹಳು.

ಮನದಿಚ್ಛೆಯ ನರಿವ ಸಖಿಯರಿಲ್ಲ ಇನ್ನೇವೆನವ್ವಾ ; ಎನ್ನ ಮನದಿಚ್ಛೆಯ ನರಿವ ಗೆಳತಿಯ

ರಿಲ್ಲ, ಪ್ರೇಮಿಗಳಿಲ್ಲ , ಆರಿಗೆ ನನ್ನ ಮನದಿಚ್ಛೆ ಹೇಳುವದು, ಹೇಳಿಹೆನೆಂದಡೆ ಕೇಳುವ ಹೃದಯ ಪ್ರೇಮಿಗಳಿಲ್ಲವಲ್ಲ. ಅರುಹೃದಯದವರಿಲ್ಲವಲ್ಲ . ಅರುವಿನ ಕಣ್ಣಿನ ಕತ್ತಲೆಯ ಕಳೆವರಿಲ್ಲವಲ್ಲ . ಇನ್ನೇನ ಹೇಳುವದು ? ಇನ್ನೇನ ಮಾಡುವದು ? ಇನ್ನೇನ ಬದುಕುವದು ?

ಮನಮಥನ ವೈರಿಯ ಅನುಭಾವದಲ್ಲಿ ಎನ್ನ ಮನ ಸಿಲುಕಿ ಬಿಡದು : ಇನ್ನೆಲ್ಲಿ ಮನಮಥನ '' ಅರಿದೆನೆಂದಡೆ ಅರಿಯಬಾರದು, ಘನಕ್ಕೆ ಘನ ತಾನೆ ನೋಡಾ. '' ಅರಿಯಬಾರದ ಘನ ಅದು ಘನಕ್ಕೆ ಘನ ತಾನೆ. ಅದನ್ನು ಕಾಣುವದು ಆವಾಗ ? ಅದರಲ್ಲಿ ಒಂದಾಗುವದು ಆವಾಗ ? ಮನವದು ಅರಿಯಬಾರದ ಘನ. ಘನಕ್ಕೆ ಘನ . ಅದರಲ್ಲಿ ಲೀಯವಾಗುವದು ಅದೆಂತು ? ಇದಕ್ಕೆ ವಿರುದ್ಧವಾದುದು ಅದು ವೈರಿ. ಇಲ್ಲದುದು ಕಲ್ಪಿಸುವ ಸಂಕಲ್ಪ ; ಇದ್ದುದ ನರಿಯದಿಹ ವಿಕಲ್ಪ . ಈ ಸಂಕಲ್ಪ ವಿಕಲ್ಪರೂಪ ವೈರಿ ಇದು ಇಲ್ಲದುದೆ ಕಲ್ಪಿಸಿತಲ್ಲ,

'' ತನು ವಿಡಿದಿಹುದು ಪ್ರಕೃತಿ, ಪ್ರಕೃತಿ ವಿಡಿದಿಹುದು ಪ್ರಾಣ, ಪ್ರಾಣ ವಿಡಿದಿಹುದು ಜ್ಞಾನ, ಜ್ಞಾನ ವಿಡಿದಿಹುದು ಗುರು, ಇಂತೀ ಗುರು ಲಿಂಗ ಜಂಗಮ ಪ್ರಸಾದ ಸಗುಣವೆಂದು ಕಂಡು ನಿರ್ಗುಣವೆಂಬ ಸಂದೇಹಿಗಳ ಮುಖವ ತೋರದಿರು ಕೂಡಲಸಂಗಮದೇವಾ. ''

ಈ ವೈರಿಯ ಅನುಭಾವದಲ್ಲಿ ಎನ್ನ ಮನ ಸಿಲುಕಿ ಬಿಡದು. ಇಲ್ಲದ ತನುವ ಕಲ್ಪಿಸಿ, ಪ್ರಕೃತಿ ಕಲ್ಪಿಸಿ, ಪ್ರಾಣ ಕಲ್ಪಿಸಿ, ಜ್ಞಾನ ಕಲ್ಪಿಸಿ, ಜ್ಞಾನವಿಡಿದ ಗುರು ಲಿಂಗ ಜಂಗಮ ಪ್ರಸಾದ ಇವು ಸಾಕಾರ ಸಗುಣವೆಂದು ಕಲ್ಪಿಸಿ ಇವು ಎಲ್ಲವುಗಳಿಗೆ ಬೇರಾಗಿಹ ನಿರ್ಗುಣವೆಂದು ಹೇಳಿಕೊಳ್ಳವುದರಲ್ಲಿ ಎನ್ನ ಮನ ಸಿಲುಕಿ ಬಿಡದು. ಇನ್ನೇನ ಮಾಡುವೆ ನೆಲೆ ಕರುಣೆಯಿಲ್ಲದ ತಾಯೆ ಎನ್ನ ಮನ ಇಷ್ಟು ಮರವು ಮಾಯೆಯಲ್ಲಿ ಸಿಕ್ಕು ಇನ್ನೇನ ಮಾಡುವೆ ಎಲೆ ಕರುಣೆಯಿಲ್ಲದ ತಾಯೆ, ಕರುಣೆಯಿಲ್ಲದ ಗುರು ತಾಯೆ ಎಂದು ಹೇಳಿಹಳು .

ದಿನ ವೃಥಾ ಹೋಯಿತ್ತಾಗಿ ಯೌವ್ವನ ಬೀಸರವಾಗದ ಮುನ್ನ ಪಿನಾಕಿಯ ನೆನಹವ್ವಾ ಶಂಭುಜಕ್ಕೇಶ್ವರಾ; ದಿನಂಗಳು ಸುಮ್ಮನೆ ನಿರುಪಯೋಗವಾಗಿ ಹೋದವು. ಯೌವನ ವ್ಯರ್ಥವಾಗದ ಮುನ್ನ ಶಿವನ ಕೂಡವ್ವಾ. ಎಲೆ ಮನವೆ, ನಿನ್ನ ಬಾಳು ವ್ಯರ್ಥವಾಯಿತ್ತಲ್ಲ ;

ನಿನ್ನ ಅರುಹೃದಯವಾಗಿಹ ಯೌವ್ವನ ವ್ಯರ್ಥವಾಗದ ಮುನ್ನ ಬೇಧಿಸ ಬಾರದಿಪ್ಪ ಅಭೇದ್ಯ ಶಿವನ ಕೂಡವ್ವ. ಅದನ್ನು ಬೇಧಿಸಿ ತಂದು ಕೊಟ್ಟನೆನ್ನಯ ಶ್ರೀಗುರು, ಭೇದಿಸ ಬಾರದಿಪ್ಪ ಅಭೇದ್ಯ ಶಿವನನ್ನು ತನ್ನ ಮಹಾನುಭವ ರೂಪಿ ಜ್ಞಾನದಿಂದ ಭೇದಿಸಿ , ವಾಣಿ ಮನ ಭಾವಕ್ಕೆ ತಂದು ಕೊಟ್ಟಾಗ, ಬಹು ಬೇಗದಿಂದ ತನ್ನ ಅಭೇದ್ಯವಾಗಿಹ ಶಿವ ಸ್ವರೂಪವು ಅರಿವ ಅರುಹಿಸಿಕೊಂಬ ಈ ಉಭಯಂಗಳ ನಷ್ಟ ಮಾಡಿದಲ್ಲಿ ಆಗ ಅಭೇದ್ಯವಾಗಿಹ ಶಿವ ಸ್ವರೂಪದಲ್ಲಿ ಲೀಯವಾಗುವದು ಎಂದು ಹೇಳಿಹಳು.



1. ಜ್ಞಾನಕ್ಕೆ

# ಒಡಲೊಳಡಗಿದ ಜ್ಞಾನ

**ಉದಕದೊಳಗಣ ಕಿಚ್ಚಿನಂತೆ ಲಿಂಗೈಕ್ಯವು.**
**ವಾಯು ನುಂಗಿದ ಪರಿಮಳದಂತೆ ಲಿಂಗೈಕ್ಯವು.**
**ಉರಿಯೊಳಡಗಿದ ಕರ್ಪೂರದಂತೆ ಲಿಂಗೈಕ್ಯವು.**
**ಭಾವನಡಗಿಸಿದ ಬಯಲಿನಂತೆ ಲಿಂಗೈಕ್ಯವು.**
**ಅರಿವು ನುಂಗಿದ ಮರಹಿನಂತೆ ಲಿಂಗೈಕ್ಯವು.**
**''ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ '' ಎಂದುದಾಗಿ,**
**ವಾಙ್ಮನಕ್ಕೆ ಅಗೋಚರವಾದ ಮಹಾಶರಣನ ಒಳಗೊಂಡು**
**ಥಳ ಥಳಿಸಿ ಬೆಳಬೆಳಗಿ ಹೊಳೆವುತ್ತ,**
**ನಿಃಶಬ್ದ ಬ್ರಹ್ಮವಾಗಿರ್ದನಯ್ಯ ನಮ್ಮ ಶಂಭುಜಕ್ಕೇಶ್ವರನು.**

**ತಾತ್ಪರ್ಯ: ಉದಕದೊಳಗಣ ಕಿಚ್ಚಿನಂತೆ ಲಿಂಗೈಕ್ಯವು:**
ಉದಕವು ತೋರುವುದು ಉದಕದೊಳಗಣ ಕಿಚ್ಚು ತೋರುವದಲ್ಲ. ಉದಕ ಎಲ್ಲರ ಕಣ್ಣಿಗೆ ಕಾಣಿಸುತ್ತದೆ . ಕಿಚ್ಚು ಮಾತ್ರ ಕಾಣುವದಲ್ಲ; ಆಶ್ಚರ್ಯ ! ಉದಕದಲ್ಲಿ ಕಿಚ್ಚು ಅದೆ ಉದಕಕ್ಕು ಕಿಚ್ಚಿಗೂ ವಿರೋಧ ! ಕಿಚ್ಚಿನ ಮೇಲೆ ಉದಕ ಬಿದ್ದರೆ ಕಿಚ್ಚು ಉಳಿಯದು ; ಹೀಗಿದ್ದು, ಉದಕದೊಳಗೆ ಕಿಚ್ಚು ಇರುತ್ತದೆ. ಆ ಕಿಚ್ಚನ್ನು ಉದಕ ನಷ್ಟ ಮಾಡದು. ಅಲ್ಲಿ ಉದಕ ಕಿಚ್ಚು ಒಂದಾಗಿ ಕಾಣಬರುತ್ತಿವೆ. ಮುಟ್ಟ ಹೋದವರಿಗೆ ಉದಕದೊಳಗಣ ಕಿಚ್ಚು ಕಾಣಿಸುತ್ತದೆ. ಕಣ್ಣಿನಿಂದ ನೋಡ ಹೋದವರಿಗೆ ಕಾಣಿಸದು ಕಿಚ್ಚು; ಕಿಚ್ಚು ಕಾಣಬಾರದ ಘನ. ಉದಕ ಕಾಣುವದಾದರೆ ಉದಕದೊಳಗಣ ಕಿಚ್ಚು ಕಾಣಬಾರದ ಘನ . ಈ ದೃಷ್ಟಾಂತದಂತೆ ಕಾಣಬಾರದ ಘನವ ಕಾಣ ಹೋಗಿ ತಾನು ಅದುವೆ ಆದುದೆ ಲಿಂಗೈಕ್ಯವು.

[1] ಲಿಂಗೈಕ್ಯವು ಎಂಜಲ ಮಾತಿನವರದಲ್ಲ[1] ಮಿಗೆ ಮಿಗೆ ಮೀಸಲವಾಗಿಹ ನಿಃಶಬ್ಧ ವೇದಿಗಳ ಇರವು. ಶಬ್ದನಷ್ಟ ಮಾಡಿದವರ ಇರವು. '' ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟ. ಇಂತೀ ಪಂಚ ನಷ್ಟದೊಳಗೆ ನಾನು ನಷ್ಟ. ನಾನು ನಷ್ಟವಾಗಿ, ನೀನು ನಷ್ಟ. ನೀನು ನಷ್ಟವಾಗಿ, ಕಲಿದೇವರ ದೇವ ನೆಂಬುದು ನಿಃಶಬ್ದ ಬ್ರಹ್ಮ ಮುಚ್ಯತೆ ಎನುತಿರ್ದನು '' ಲಿಂಗೈಕ್ಯವು ಅರಿವ ಅರುಹಿಸಿಕೊಂಬ ಈ ಉಭಯ ನಷ್ಟವಾಗಿ ಅರಿಯಲಿಲ್ಲದ ಅರುವ ಅವಗ್ರಹಿಸಿ ಅರಿಯಲಿಲ್ಲ, ಮರೆಯಲಿಲ್ಲ. ನಿಜವ ನಿಂದುದೆ ಲಿಂಗೈಕ್ಯವು. ಉದಕ ರೂಪ ತನು, ಮನ, ನೆನಹು, ಭಾವ, ಜ್ಞಾನ. ಹಮ್ಮು, ನಾನು, ನೀನು ಎಂಬುದು ನಷ್ಟವಾಗಿ ನಿಃಶಬ್ದ ಬ್ರಹ್ಮದಿರುವೆ ತನ್ನ ಇರುವಾದುದು ಅದು ಉದಕದೊಳಗಣ ಕಿಚ್ಚಿನಂತೆ ಲಿಂಗೈಕ್ಯವು ಎಂದು ಹೇಳಿಹಳು

**ವಾಯು ನುಂಗಿದ ಪರಿಮಳದಂತೆ ಲಿಂಗೈಕ್ಯವು :** ವಾಯು ಪರಿಮಳ ನುಂಗಿತ್ತೆ ? ಇದೆಂಥ ಆಶ್ಚರ್ಯ ! ಪರಿಮಳ ವಾಯುವ ನುಂಗಿದುದರಿಂದ ಪರಿಮಳ ಘಮಿ ಘಮಿಸುವ ಘನತೆಗೆ ತಂದುದು ವಾಯು. ಗಾಳಿ ಯನ್ನು ಪರಿಮಳ ನುಂಗದಿದ್ದಲ್ಲಿ ಪರಿಮಳದ ಹಿರಿಮೆ ಸಕಲರಿಗೆ ಕಾಣುತ್ತಿದ್ದಿಲ್ಲ. ವಾಯುವ ನುಂಗಿಯೆ ಸುಗಂಧದ ಹಿರಿಮೆ ಗೊತ್ತಾದಂತೆ ಲಿಂಗೈಕ್ಯವು. ಪ್ರಾಣ ರೂಪಿ ವಾಯು ತೆರಹಿಲ್ಲದ ಲಿಂಗ ಭರಿತವೆಂಬ ನಾಮವಿಡಿದು ಅರಿದ ರಿದು ನೋಡುವುಡೆ ಪ್ರಾಣವೆಂಬುದಕ್ಕೆ ತೆರಹಿಲ್ಲದಂತಾಗಿ ಲಿಂಗವದು ಭರಿತ ವಾಯಿತ್ತು. ಆಗ ಪ್ರಾಣವೆಂಬ ನಾಮ ಕೆಟ್ಟು ಲಿಂಗ ಭರಿತವೆಂಬುದು ಸಿದ್ಧವಾಯಿತ್ತು. ಕಾರಣ ವಾಯುವೆಂಬ ಪ್ರಾಣವ ನುಂಗಿದ ಪರಿಮಳವದು ಅರು ಪಿನ ಪರಿಮಳ. ಇದು ಪ್ರಾಣವೆಂಬ ನಾಮನುಂಗಿ ನಿರ್ನಾಮ ಜಂಗಮ ಲಿಂಗವೆನಿಸಿತ್ತು. ಈ ನಿರ್ನಾಮಿಯಾಗಿಹ

ಮಹದಿರುವೆ ಲಿಂಗೈಕ್ಯವು ಎಂದು ಹೇಳಿಹಳು.

**ಉರಿಯೊಳಡಗಿದ ಕರ್ಪೂರದಂತೆ ಲಿಂಗೈಕ್ಯವು :** ಕರ್ಪೂರ ಇರುವವರೆಗೂ ಉರಿಯು ಕಾಣಿಸುವದು. ಕರ್ಪೂರ ನಷ್ಟವಾದಲ್ಲಿ ಉರಿಯು ಇಲ್ಲ. ಕರ್ಪೂರವಿದ್ದಾಗ ಉರಿಯು ಕರ್ಪೂರವ ಕಾಣಗೊಡದಂತೆ ತಾನೆ ಬೆಳಗುಳ್ಳದ್ದಾಗಿ ಬೆಳಗುತ್ತಿಹುದು. ಹಾಗೆ ನಿಜ ಜ್ಞಾನ ರೂಪಿ ಉರಿಯೊಳಗೆ ಭರಿತ ಭಾವವೆಂಬ ಕರ್ಪೂರವು ನಿಜ ಜ್ಞಾನವೆಂಬ ಉರಿಯೊಳಡಗಿದ ಕರ್ಪೂರದಂತೆ ಅಖಂಡಿತ ಲಿಂಗವು ಅಪ್ರಮಾಣ ಶರಣಂಗೆ ನಿಸ್ಸೀಮವಾಗಿ ಬೆಳಗುತಿಪ್ಪುದೆ ಲಿಂಗೈಕ್ಯವು ಎಂದು ಹೇಳಿಹಳು.

**ಭಾವ ನಡಗಿಸಿದ ಬಯಲಿನಂತೆ ಲಿಂಗೈಕ್ಯವು :** '' ಭಾವ ಭಾವಿಸಲುಂಟೆ ? ಭಾವ ಭಾವಿಸಲರಿಯದು ಅದೇನು ಕಾರಣವೆಂದರೆ ಭಾವದಲ್ಲಿ ಭರಿತನಾಗಿ. ನೇತ್ರ ನೋಡಲುಂಟೆ ? ನೇತ್ರ ನೋಡಲರಿಯದು ಅದೇನು ಕಾರಣ ನೇತ್ರೇಂದ್ರಿಯ ಬಾಗಿಲಲ್ಲಿ ನಿಂತು ನೋಡುವನಾಗಿ. ಶ್ರೋತೃ ಕೇಳಲುಂಟೆ ? ಶ್ರೋತೃ ಕೇಳಲರಿಯದು ಅದೇನು ಕಾರಣ ಶ್ರೋತ್ರೇಂದ್ರಿಯ ಬಾಗಿಲಲ್ಲಿ ನಿಂತು ಕೇಳುವನಾಗಿ. ನಾಸಿಕ ಪರಿಮಳವರಿಯುವುದೇ ? ನಾಸಿಕ ಪರಿಮಳವರಿಯದು ಅದೇನು ಕಾರಣ ನಾಸಿಕದ ಬಾಗಿಲಲ್ಲಿ ನಿಂದು ವಾಸಿಸುವವ ತಾನಾಗಿ. ಜಿಹ್ವೆ ರುಚಿಯ ನರಿವುದೆ ? ಜಿಹ್ವೆ ರುಚಿಯನರಿಯದು ಅದೇನು ಕಾರಣ ಜಿಹ್ವೆಯ ಬಾಗಿಲಲ್ಲಿ ನಿಂದು ರುಚಿಯ ನಿಶ್ಚಯಿಸುವವ ತಾನಾಗಿ. ತ್ವಕ್ ಸ್ಪರ್ಶಿಸಬಲ್ಲದೆ ಸ್ಪರ್ಶಿಸಲರಿಯದು ಅದೇನು ಕಾರಣ ? ತ್ವಕ್ಕಿನಲ್ಲಿ ನಿಂದು ಸ್ಪರ್ಶಿಸುವ ತಾನಾಗಿ. ಜಂತ್ರಂಗಳಾಡ ಬಲ್ಲವೆ ? ಜಂತ್ರಂಗಳಾಡಲರಿಯವು ಅದೇನು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಶರಣ ಸರ್ವಾಂಗಲಿಂಗಿ. ''

ಭಾವವನ್ನೆ ಬಯಲಿನತ್ತ ನಡೆಸಿದ ಶರಣ ; ಭಾವವನ್ನೆ ಲಿಂಗದತ್ತ ನಡೆಸಿದ ಶರಣ : ಭಾವವೆಂಬ ಹುಟ್ಟನ್ನೆ ಕೆಡಿಸಿ ಭರಿತ ಮಾಡಿದ ಶರಣ. ಶರಣ ಲಿಂಗ ಭರಿತ ಶರಣನಾದುದರಿಂದ, ಶರಣ ಸರ್ವಾಂಗ ಲಿಂಗವಾದುದರಿಂದ ನೋಡುವ ನೋಟ ಲಿಂಗ. ಆ ನೋಟಕ್ಕೆ ಕಾಣುವ ರೂಪ ಲಿಂಗ, ಕೇಳುವ ಕಿವಿ ಲಿಂಗವಾಗಿ, ಆ ಕಿವಿಗೆ ಕೇಳುವ ಶಬ್ದ ಲಿಂಗ , ವಾಸಿಸುವ ಘ್ರಾಣ ಲಿಂಗ, ಆ ಘ್ರಾಣಕ್ಕೆ ವಾಸಿಸುವ ವಾಸನೆ ಲಿಂಗ. ಜಿಹ್ವೆಯು ಲಿಂಗ, ಆ ಜಿಹ್ವೆಗೆ ರುಚಿಸುವ ರಸವು ಲಿಂಗ. ತ್ವಕ್ ಲಿಂಗ ಆ ತ್ವಕ್ಕಿಂಗೆ ಸ್ಪರ್ಶಿಸುವ ಸ್ಪರ್ಶ ಲಿಂಗ. ಹೀಗೆ ತನ್ನ ಇಂದ್ರಿಯಂಗಳು ಇಂದ್ರಿಯಂಗಳಾಗಲರಿಯವು ಅವು ಅತೀಂದ್ರಿ ಆಗಿಹುದರಿಂದ ನಿಮ್ಮ ಶರಣ ಸರ್ವಾಂಗಲಿಂಗವಾದುದರಿಂದ ಲಿಂಗೈಕ್ಯವು ಎಂದು ಹೇಳಿಹಳು.

ಅರಿವು ನುಂಗಿದ ಮರಹಿನಂತೆ ಲಿಂಗೈಕ್ಯವು : ಇದೆಂಥ ಮರವು. ಇದು ಅರಿವ ಅರುಹಿಸಿಕೊಂಬ ಅರಿವ ನುಂಗಿದ ಮರಹು. ಇಲ್ಲಿ ಅರಿತೆನೆಂಬುದು ಅಜ್ಞಾನ; ಮರೆತುದೆಲ್ಲ ದಿವ್ಯಜ್ಞಾನ. ಅರಿತುದೆಲ್ಲವ ಮರೆತುದು ದಿವ್ಯಜ್ಞಾನ. ತನ್ನಿಂದ ತನ್ನ ಆರು ಅರಿತಿಹರು ಅವರು ಅರಿವ ನುಂಗಿದವರು, ಆರು ಅರಿಯಬಾರದ ಘನವರಿತು ಅರಿಯದಂತಿಪ್ಪರು ಅವರು ಮರಹಿನಂತೆ ಇದ್ದವರು, ಅವರೆ ಲಿಂಗೈಕ್ಯರು. ಪ್ರಭುದೇವ ಲಿಂಗೈಕ್ಯನು. ಬಸವಾದಿ ಪ್ರಮಥರಾಗಿಹ ಶರಣ ಶರಣೆಯರು ಲಿಂಗೈಕ್ಯರು. ಯತಾ ವಾಚೊ ನಿವರ್ತಂತೇ ಅಪ್ರಾಪ್ಯ ಮನಸಾಸಹ ಎಂದುದಾಗಿ ವಾಙ್ಮನಕ್ಕೆ ಅಗೋಚರವಾದ ಮಹಾಶರಣನ ಒಳಗೊಂಡು ಥಳ ಥಳಿಸಿ ಬೆಳ ಬೆಳಗಿ ಹೊಳೆವುತ್ತಿಪ್ಪ ನಿಶಬ್ದ ಬ್ರಹ್ಮವಾಗಿರ್ದನಯ್ಯ ನಮ್ಮ ಶಂಭುಜಕ್ಕೇಶ್ವರಾ'' ಮಹಾಶರಣ ನಿಃಶಬ್ದ ಬ್ರಹ್ಮವಾಗಿ ತನ್ನ ಸ್ವಮಹಿಮೆಯಲ್ಲಿ ಥಳಥಳಿಸಿ ಬೆಳಬೆಳಗಿ ಹೊಳೆವುತ್ತಿಪ್ಪನೆಂದು ಹೇಳಿಹಳು.

1 ಒಡಲೊಳಗಣ ಜ್ಞಾನ ಮೀಸಲು, ಪುಸ್ತಕದ ಜ್ಞಾನ ಎಂಜಲು

# ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ ?

**ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ ?**
**ಏಕೆನ್ನ ಘೋರ ಸಂಸಾರದಲ್ಲಿರಿಸಿದೆ ?**
**ಏಕೆನಗೆ ಕರುಣಿಸಲೊಲ್ಲದೆ ಕಾಡಿಹೆ ?**
**ಏಕೆ ಹೇಳಾ ಎನ್ನ ಲಿಂಗವೆ ?**
**ಆನು ಮಾಡಿದ ತಪ್ಪೇನು ?**
**ಸಾಕಲಾಗದೆಂದು ಅಕ್ಕೊತ್ತಿ ನೂಕಿದಡೆ ಏಕೆ ನಾ ನಿಮ್ಮ ಬಿಡುವೆ**
**ಶಂಭುಜಕ್ಕೇಶ್ವರಾ ?**

**ತಾತ್ಪರ್ಯ : ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ :** ಬಾರದ ಭವಂಗಳಲ್ಲಿ ಬರಿಸಿದುದು ಆವುದು? ಶುಕ್ಲ ಶೋಣಿತದಿಂದಾದ ಲಜ್ಜೆ ಸಾಲದೇ ? ಹೇಸಿಕೆ ಸಾಲದೇ ? ಸಪ್ತ ಧಾತುದಿಂದ ಆದ ನರಕ ಸಾಲದೆ ? ಮತ್ತೆ ದೇಹ ಬುದ್ಧಿ, ದೇಹಾಭಿಮಾನ, ಮೋಹ, ಸತ್ಯತ್ವ ಬುದ್ಧಿ ಮಾಡಿಕೊಂಡು ಎನ್ನ ನಿಜವ ಮರತುದು ಸಾಲದೆ ತಂದೆ !

ಪುನಃ ಪುನಃ ಹುಟ್ಟು ಸಾವುಗಳೆಂಬ ಮೃತ್ಯುರೂಪಿ ಕುಣಿಗೆ ಒಪ್ಪಿದುದು ಈ ಅರುವಿನ ಜನ್ಮಕ್ಕೆ ನಾಚಿಕೆಯಲ್ಲವೆ ? ಯಮನ ಕೈಯಿಂದ ನಾನಾ ವಿಪರೀತ ಶಿಕ್ಷೆಗೊಳಪಡಿಸುವದು ಬಾರದ ಭವಂಗಳಲ್ಲಿ ಬರಿಸಿದುದು ಸುಳ್ಳೆ ಅಯ್ಯ ? '' ಹೆಗ್ಗಣವ ನಿಕ್ಕಿ ನೆಲಗಟ್ಟ ಕಟ್ಟಿದಂತಾಯಿತ್ತೆನ್ನ ಕಾಯ ಗುಣ. ಅಹಂಕಾರ ಪ್ರಬೋಧ ಗಳೇಕಯ್ಯ ? ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರವ ನಿಕ್ಕಿ ಎನ್ನ ಮಾಡಿ ಎನ್ನ ಬಾಧಿಸಲೆಂದು ಲಿಂಗಯ್ಯ ತಂದೆ ಆದಿ ವ್ಯಾಧಿಗಳ ಕಳೆದು ನಿರ್ವಾಣವಪ್ಪ ಪದವ ಕರುಣಿಸು ಕೂಡಲ ಸಂಗಮದೇವಾ. ''

ಏಕೆನ್ನ ಇಂತಪ್ಪ ನೆಲೆಗಟ್ಟ ಕಟ್ಟಿದುದೇಕೆ ? ಹೆಗ್ಗಣವ ನಿಕ್ಕಿ ನೆಲಗಟ್ಟ ಕಟ್ಟಿದುದೇಕೆ ? ಹೆಗ್ಗಣವ ನಿಕ್ಕಿದಲ್ಲಿ ನೆಲಗಟ್ಟ ಉಳಿಯಬಲ್ಲುದೆ ? ಆ ಮನೆ ಎಷ್ಟು ದಿನ ಉಳಿವುದು ? ನೆಲಗಟ್ಟ ಉಳಿಯದಿದ್ದಲ್ಲಿ ಅದರ ಮೇಲೆ ಕಟ್ಟಿದ ಮನೆಯಾಗಲಿ, ಮಹಲೆ ಆಗಲಿ ಎಷ್ಟು ದಿನ ಉಳಿಯುವದು ? ಹಾಗೆ ಎನ್ನ ಕಾಯಗುಣ ಹೆಗ್ಗಣದಂತಾಯಿತ್ತೆ ? ಏಕೆನ್ನ ಕಾಯ ಗುಣವ ಕೊಟ್ಟೆ !

ನಿನಗೆ ಎನ್ನ ಮೇಲೆ ಕರುಣೆ ಬಾರದೆ ? ಈ ಘೋರ ಸಂಸಾರದಲ್ಲಿರಿಸಿದೆ, ತಾಯಿ ಗರ್ಭದಲ್ಲಿ ನವಮಾಸವಿರಿಸಿದುದು ಘೋರ ಸಂಸಾರ ಅಲ್ಲವೆ ! ತಾಯಿಯ ಗರ್ಭದ್ವಾರದಿಂದ ಹೊರಗೆ ಬರುವದು ನಾನಾ ಕಷ್ಟವಲ್ಲವೆ ! ಪ್ರಸೂತಿ ವಾಯುವಿನ ಪೆಟ್ಟು ಸಾಮಾನ್ಯವೆ !

ಆ ಪೆಟ್ಟಿನಿಂದ ಮೂರ್ಛಿತನಾಗಿ ಎಲ್ಲವು ವಿಸ್ಮೃತಿಯಾಗಲು ಅದೆಂಥ ಪೆಟ್ಟು , ಅದೆಂಥ ಘಾಯ ? ಇಷ್ಟಾದರೂ ಎನ್ನ ಮೇಲೆ ಕರುಣೆ ತೋರಿಸದೆ ಕಾಡುವಿಯಲ್ಲ ! ಏಕೆನ್ನ ಮೇಲೆ ಈ ಮುನಿಸು ? ಇದಲ್ಲದೆ ಭವಕ್ಕೆ ಬಂದ ಮೇಲೆ ಇಲ್ಲಿಯೂ ಇಂದ್ರಿಯಂಗಳ ಉಪಟಳ. ಇತ್ತ ಹಸಿವಿನ ಬಾಧೆ, ತೃಷೆಯ ಬಾಧೆ ಉಂಡರೂ ಸಂತೋಷವಿಲ್ಲ, ಉಟ್ಟರೂ ಸಂತೋಷವಿಲ್ಲ ,

ಉಟ್ಟುಕೊಳ್ಳಲು ಬಟ್ಟೆ ಸಿಕ್ಕರೆ ಅದರ ನಂತರ ಬದುಕುವ ಬಾಧೆ, ಹಣದ ಬಾಧೆ, ಅದಾದ

ಮೇಲೆ ರಾಗ ದ್ವೇಷದ ಒಳಬಾಧೆ, ಸುಖ ದುಃಖದ ಬಾಧೆ, ಸುಖ ಬಯಸಿದರೆ ಬಯಸದೆ ಬರುವದು ದುಃಖ. ಗೌರವ ಬಯಸಿದರೆ ಅಗೌರವ ಹಿಂದೆ ಇಹುದು. ಹೀಗೆ ಕರ್ಮದ ಬಾಧೆ. ಕಾಮದ ಬಾಧೆ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳ ಬಾಧೆ.

ಒಳಗೂ ಬಾಧೆ, ಹೊರಗೂ ಬಾಧೆ. ಹೀಗಾದಲ್ಲಿ ನಿರ್ವಾಣ ಪದ ಪಡೆಯುವುದು ಆವಾಗ ? ಇವುಗಳೆಲ್ಲ ನನ್ನ ನಿರ್ವಾಣ ಪದದ ವಿಘ್ನಗಳು. ಇವುಗಳ ತಾಪ ತಡೆಯಲು ಸೈರಣೆ ನನಗೆಲ್ಲಿಯದು ? ಶಮೆ ನನ್ನಲ್ಲಿ ಇಲ್ಲ , ದಮೆ ಇಲ್ಲ . ವಿವೇಕ ವೈರಾಗ್ಯ ಮುನ್ನಿಲ್ಲ. ಗುರುಭಕ್ತಿಯಿಲ್ಲವೆಂದಲ್ಲಿ ನನಗೇಕೆ ಕರುಣಿಸಲೊಲ್ಲದೆ ಕಾಡುವಿ.

ಏಕೆ ಹೀಗೇಕೆ ? ಎನ್ನನು ಕಾಡುವೆ ಹೇಳು ನನ್ನಯ್ಯ ' ಓ *ಲಿಂಗದೇವನೆ* '[1] ನಾನು ಮಾಡಿದ ತಪ್ಪೇನು ? ನನಗೆ ತಪ್ಪಾವುದು ಒಪ್ಪಾವುದು ತಿಳಿಯದು. ತೆರಹಿಲ್ಲದಭವನಾಗಿಹ ನಿನ್ನಲ್ಲಿ ತಪ್ಪಾವುದೆಂದು ತಿಳಿವುದು ? ಒಪ್ಪಾವುದೆಂದು ತಿಳಿವುದು ?

ಅತೀಂದ್ರಿಯನಾದ ನಿನ್ನಲ್ಲಿ , ನನ್ನ ಇಂದ್ರಿಯಂಗಳ ಕಾರ್ಯವಾಗಿಹ ಶುಭ ಆವುದುಕ್ಕನ್ನ ಬೇಕು ? ಅಶುಭ ಆವುದಕ್ಕನ್ನ ಬೇಕು, ಕಲ್ಪನಾರಹಿತನಾಗಿಹ ನಿನಗೆ ಎನ್ನ ಮನದ ನೆನಹು, ಆವುದು ಒಳ್ಳೆಯದೆಂದು ನೆನಯಲಿ ? ಆವುದು ಕೆಟ್ಟುದೆಂದು ನೆನಯುವದು ಬಿಡುವುದು ಓ ನನ್ನಯ್ಯ ? ನನಗಾವುದು ತಿಳಿಯದಾಗಿದೆ ನಾನು ಮಾಡಿದ ತಪ್ಪುಗಳೆಣಿಸದೆ ನನ್ನ ರಕ್ಷಿಸು ತಂದೆ ಎಂದು ಹೇಳಿಹಳು.

ಸಾಕಲಾಗದೆಂದು ಅಕ್ಕೊತ್ತಿ ನೂಕಿದಡೆ ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ ; ತಾಯಿಯ ಗರ್ಭದಲ್ಲಿ ನಿನ್ನ ರಕ್ಷಿಸಲಾಗದೆಂದು ಪ್ರಸೂತಿ ವಾಯು ಎಂಬ ಹೊಡೆತ ಹಾಕಿ ಹೊರ ನೂಕಿದಡೆ ಇಲ್ಲಿ ನಾ ನಿಮ್ಮ ಬಿಡುವೆನೆ !

ನೀವೆ ಎನ್ನ ರಕ್ಷಣೆಯ ದೇವ, ಗುರುವಾಗಿ ಎನ್ನ ರಕ್ಷಣೆ ಮಾಡ ಬಂದ ಒಡೆಯ; ಲಿಂಗವಾಗಿ ಎನ್ನ ರಕ್ಷಣೆ ಮಾಡಬಂದ ಒಡೆಯ ಜಂಗಮವಾಗಿ ಎನ್ನ ರಕ್ಷಣೆ ಮಾಡಬಂದ ಒಡೆಯ ತ್ರಿವಿಧ ಒಂದೆ ರೂಪದ ಒಡೆಯ ನೀನಿರುವಲ್ಲಿ ನಾ ನಿಮ್ಮ ಬಿಡುವೆನೆ ! ಶಂಭುಜಕ್ಕೇಶ್ವರಾ ಎಂದು ಹೇಳಿಹಳು.

□

1 ಓ ಜ್ಞಾನದೇವನೆ

# ಶಿವಭಕ್ತರಿಗೂ ಶಿವಾತ್ಮ ಸ್ವರೂಪಕ್ಕೂ ಭೇದವಿಲ್ಲ

**ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ?**
**ಶಿವಭಕ್ತರು ಶಿವಾತ್ಮ ಸ್ವರೂಪು ಎನ್ನುವರು ಅನ್ಯರೆಂದುಂಟೆ ?**
**ಇದು ಗನ್ನದ ಮಾತೆಂದೆ ಶಂಭುಜಕ್ಕೇಶ್ವರ.**

**ತಾತ್ಪರ್ಯ : ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ?:** ಕಾರಣ ; ಅದಾವ ಕಾರಣದಿಂದ ? ಕಾರಣವದು ಬಂಗಾರವು ಕಾರ್ಯವು ಆಭರಣವು. ಬಂಗಾರದಲ್ಲಿ ಆಭರಣವು ಬಂಗಾರವಲ್ಲದನ್ಯವಲ್ಲ . ಅದು ಬಂಗಾರ ಬಂಗಾರವೆ. ಬಂಗಾರದ ಹೊರ್ತು ಅನ್ಯವಲ್ಲ .

ಹಾಗೆ ಗುರು ಕರುಣಾಮಯನಿಗೆ ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ? ''ಮಾಂಸಪಿಂಡ ಎನಲೊಲ್ಲದೆ ಮಂತ್ರಪಿಂಡವೆಂದ ಬಸವಣ್ಣ, ಪಂಚಭೂತ ಕಾಯ ಎನಲೊಲ್ಲದೆ ಪ್ರಸಾದ ಕಾಯವೆಂದ ಬಸವಣ್ಣ , ವಾಯು ಪ್ರಾಣಿ ಎನಲೊಲ್ಲದೆ ಲಿಂಗ ಪ್ರಾಣಿ ಎಂದ ಬಸವಣ್ಣ . ಜಗ ಭರಿತನೆಂಬ, ಶಿವನೆಂಬ ಶಬ್ದಕ್ಕೆ ಅಂಗವಿಸಲೊಲ್ಲದೆ ಶರಣ ಭರಿತನಾದ ಕೂಡಲ ಚೆನ್ನಸಂಗಯ್ಯ. ''

ಮಾಂಸ ಪಿಂಡ ಎನಲೊಲ್ಲದೆ ಮಂತ್ರ ಪಿಂಡವೆಂದು ಕಾಯ ಬಿಟ್ಟಡೆ ಶೋಕವೇಕೆ ? ಪಂಚ ಭೂತ ಕಾಯ ಎನಲೊಲ್ಲದೆ ಪ್ರಸಾದ ಕಾಯವಾಗಿ ಕಾಯ ಬಿಟ್ಟಡೆ ಶೋಕವೇಕೆ ? ವಾಯು ಪ್ರಾಣಿ ಎನಲೊಲ್ಲದೆ ಲಿಂಗ ಲಿಂಗವೆಂದು, ಲಿಂಗ ಪ್ರೇಮ ಲಿಂಗ ಭಾವ ಲಿಂಗ ಜ್ಞಾನವಾಗಿಹ ಕಾಯ ಬಿಟ್ಟರೆ ಶೋಕವೇಕೆ ?

ಜಗಭರಿತನೆಂಬ ಶಬ್ದಕ್ಕೆ ಒಪ್ಪದ ಶರಣ ತಾನೆ ಭರಿತನೆಂದು ಕಾಯ ಬಿಟ್ಟಡೆ ಶೋಕವೇಕೆ? ಮಂತ್ರ ಪಿಂಡವದು ಅಮರಪಿಂಡ , ಅಮರತ್ವವರಿತ ಕಾಯ. ಮಂತ್ರವದು ಓಂ ಮಂತ್ರವದು ನಮಃಶಿವಾಯ. ಈ ಮಂತ್ರದರ್ಥವು ತಿಳಿವುಡೆ ತಾನೆ ಮಯನು. ಮಂತ್ರಕ್ಕೆ ಮಂತ್ರವಾದವನು ತಾನೆ. ಮಂತ್ರ ಕಿವಿಗೆ ಕೇಳುವುದಾದರೆ ಕಿವಿಗೆ ಕೇಳದ ಮಂತ್ರ ತಾನೆ. ಹೀಗೆ ಗುರು ಕಾರುಣ್ಯದ ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ?

ಪಂಚಭೂತ ಕಾಯ ಎನಲೊಲ್ಲದೆ ಪ್ರಸಾದ ಕಾಯವೆಂದ ಬಸವಣ್ಣ ; ಪ್ರಸಾದ ಕಾಯವದು ಶುದ್ಧ , ಸಿದ್ಧ, ಪ್ರಸಿದ್ಧ . ಕಾಯವೆ ಶುದ್ಧ , ಕಾಯವೆ ಸಿದ್ಧ , ಕಾಯವೆ ಪ್ರಸಿದ್ಧ .

ಪ್ರಸಾದವದು ಅವಿನಾಶಿ. ಅವಿನಾಶಂಗೆ ವಿನಾಶ ಅರ್ಪಿತವಾದ್ದರಿಂದ ಅವಿನಾಶಿ ಪ್ರಸಾದ. ಇಂತಪ್ಪ ಅರಿಯಲಿಲ್ಲದ ಅರುವಾಗಿಹ ಗುರುಕಾರುಣ್ಯವೆ ಕಾರಣವಾದ ಕಾಯವ ಬಿಟ್ಟಡೆ ಶೋಕವೇಕೆ ?

ಶುದ್ಧ ಪ್ರಸಾದವಾಗಿಹ ಕಾಯ, ಸಿದ್ಧ ಪ್ರಸಾದವಾಗಿಹ ಕಾಯ, ಪ್ರಸಿದ್ಧ ಪ್ರಸಾದವಾಗಿಹ ಕಾಯ, ಅರಿಯಲಿಲ್ಲದ ಅರುವರಿತು ತೆರಹಿಲ್ಲದಭವ ತಾನಾಗಿ ನುಡಿಗೆಡೆಗೊಡನೆಂಬ ಕಾಯ ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ? '' ಅರಿತವನೆಂತು ಸತ್ತನು ? ಅರಿತವನೆಂತು ಹುಟ್ಟಿದನು ? ಅರಿತವನೆಂತು ಅಘೋರ ಪಾಶಕ್ಕೆ ಒಳಗಾದನು ? ಅರಿತವನೆ ಚಿರಂಜೀವಿ

ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನ'' ಶುದ್ಧ ಅರಿವರಿತ ಶರಣ, ಸಿದ್ಧ ಅರಿವರಿತ ಶರಣ, ಪ್ರಸಿದ್ಧ ಅರಿವರಿತ ಶರಣ.

ಇಂತಪ್ಪ ತೆರಹಿಲ್ಲದಭವನಾಗಿಹ ತನ್ನಿರುವು ಕಂಡು ನುಡಿಗೆಡೆಗೊಡದವನಾಗಿ, ನಾಮರೂಪುಳ್ಳ ಹುಸಿಯ ಅರಿವು ಕಾಣದವನಾಗಿಹುದರಿಂದ ಶುದ್ಧ ಅರಿವು ಅರಿತ ಶರಣ. ಸಂಕಲ್ಪ ವಿಕಲ್ಪ ರೂಪಿ ಹುಸಿಯ ಅರಿವು ಅರಿಯನಾಗಿ ಸ್ವಯಂ ಜ್ಯೋತಿ ಲಿಂಗವಾಗಿಹ ಸಿದ್ಧ ಅರಿವರಿತ ಶರಣ. ಭಾವ ಭ್ರಮೆಯೆಂದರಿದು ಭಾವಕ್ಕಗಮ್ಯವಾಗಿಹ ತೆರಹಿಲ್ಲದ ಲಿಂಗಭರಿತವೆಂಬ ನಿಜದಿರುವರಿತು, ತಾನೆ ಪ್ರಸಿದ್ಧ ಪ್ರಸಾದವಾಗಿ ಇಂತಪ್ಪ ಮಹದರುವಿನ ಆರುವೆ ಮಹಾಘನವಾಗಿ, ಕಾರಣದಿಂದ ಕಾಯ ಬಿಟ್ಟಡೆ ಶೋಕವೇಕೆ ?

ಇಂತಪ್ಪ ಮಹಾನುಭಾವಿಯು ಅವನೆಂತು ಸತ್ತನು ? ಅವನೆಂತು ಹುಟ್ಟಿದನು ? ಅವನೆಂತು ಅಘೋರ ಸಂಸಾರಕ್ಕೆ ಒಳಗಾದನು ? ಅಂತಪ್ಪ ಶರಣ ಅಂದು , ಇಂದು, ಎಂದೆಂದೂ ಇದ್ದಂತಿರುವ ನಿರಂತರ ಮಂಗಲಮಯ ಸ್ವಯಂ ಜ್ಯೋತಿ, ವರ್ಣಾತೀತವೆಂದು ಹೇಳಿಹಳು.

ವಾಯುಪ್ರಾಣಿ ಎನಿಸದೆ ಲಿಂಗಪ್ರಾಣಿ ಎಂದ ಬಸವಣ್ಣ. ಲಿಂಗಪ್ರಾಣಿಯಾದವ ಲಿಂಗ ಪ್ರೇಮಿ. ಲಿಂಗವೆ ತನ್ನಿರುವು ಆಗಿಹ ಪ್ರಾಣಿ. ತೆರಹಿಲ್ಲದ ಲಿಂಗ ಭರಿತವೆಂಬ ಗುರುಕಾರುಣ್ಯವ ಅರಿದರಿದು ನೋಡಿದುದರಿಂದ ಲಿಂಗಪ್ರಾಣಿ. ಇಂತಪ್ಪ ಶರಣನ ಸರ್ವಾಂಗ ಲಿಂಗವಾದುದರಿಂದ ಲಿಂಗ ಪ್ರಾಣಿ ಎಂದು ಹೇಳಿಹಳು. ಜಗಭರಿತ ಶಿವನೆಂಬ ಶಬ್ದಕ್ಕೆ ಬಪ್ಪದೆ ಶರಣ ಭರಿತನೆಂದ ಬಸವಣ್ಣ : ಶರಣ ಭರಿತಲಿಂಗ, ಲಿಂಗ ಭರಿತ ಶರಣನಾಗುವ ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ಎಂದು ಹೇಳಿಹಳು.

**ಶಿವಭಕ್ತರು ಶಿವಾತ್ಮ ಸ್ವರೂಪು ಎನ್ನುವದು ಅನ್ಯರೆಂದುಂಟೆ ? ಇದು ಗನ್ನದ ಮಾತೆಂದ ಶಂಭುಜಕ್ಕೇಶ್ವರಾ :** '' ಶಿವಭಕ್ತಂಗೆ ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ ಸ್ಥಿತಿ ಇಲ್ಲಾಗಿ ಲಯವಿಲ್ಲ , ಲಯವಿಲ್ಲಾಗಿ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪನಯ್ಯ ಗುಹೇಶ್ವರಾ ನಿಮ್ಮ ಶರಣ ಬಸವಣ್ಣ . ''

ಮುನ್ನೆಲ್ಲಿಂದ ಬಂದ ಶಿವ ಅಭೇದ್ಯ. ಶಿವನಿಂದ ಮತ್ತೆಲ್ಲಿಗೆ ಹೋದನೆಂಬುದು ಶಿವಾತ್ಮ ಸ್ವರೂಪವಾದ ಅಭೇದ್ಯ ಶಿವನಿಂದ ಬಂದು ಮತ್ತೆ ಭೇದ್ಯ ಶಿವನಾದುದರಿಂದ ಶಿವಾತ್ಮ ಸ್ವರೂಪ ಶಿವ ಭಕ್ತರು ಅಭೇದ್ಯ. ಶಿವಾತ್ಮ ಸ್ವರೂಪ ಶಿವಭಕ್ತರಿಗೂ ಶಿವಾತ್ಮ ಸ್ವರೂಪಕ್ಕೂ ಭೇದ ಮಾಡಬಾರದು. ಶಿವ ಭಕ್ತ ಶಿವಾತ್ಮ ಸ್ವರೂಪ ಒಂದೆ; ಬೇರೆಂಬುದು ಮೋಸದ ಮಾತು ಶಂಭುಜಕ್ಕೇಶ್ವರಾ ಎಂದು ಹೇಳಿಹರು.



# ತನ್ನಿಂದ ತನಗಾದ ಜ್ಞಾನಾನುಭವ

**ಜನನ ಮರಣಂಗಳಲ್ಲಿ ಬರಿಸಬಾರದ ಭಾಷೆ .**
**ನಿತ್ಯ ನೀನೆಂದು ಮರೆಹೊಕ್ಕ ಕಾರಣ ಇಹ ಪರದಲ್ಲಿ ಇರಿಸಬಾರದ ಭಾಷೆ .**
**ತನ್ನಲ್ಲಿ ತನಗೆ ವಿವರಣೆ ಇಲ್ಲದ ಕಾರಣ**
**ಪುಣ್ಯ ಪಾಪಂಗಳ ಉಣಿಸಬಾರದ ಭಾಷೆ .**
**ತನ್ನ ಪಾದೋದಕ ಪ್ರಸಾದ ಜೀವಿಯಾಗಿ ತಾ ಸಹಿತ ನಾನಿಪ್ಪೆ.**
**ನಾ ಸಹಿತ ತಾನಿಪ್ಪ**
**ಕಾರಣ ವಂಚನೆ ಬಾರದು ಎನಗೆ ತನಗೆ.**
**ಶಂಭುಜಕ್ಕೇಶ್ವರನ**
**ಸದ್ಗುರು ಅಪ್ಪಣೆಯಿಂದ ನೀನೊಲಿದು ಸಲಹು**
**ಎನ್ನ ಪ್ರಾಣಲಿಂಗವಾಗಿ.**

**ತಾತ್ಪರ್ಯ : ಜನನ ಮರಣಂಗಳಲ್ಲಿ ಬರಿಸಬಾರದ ಭಾಷೆ ;** ಈ ಭಾಷೆ ಶ್ರೀಗುರುವಿನದು. ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನವಾಗಿಹ ಭಾಷೆ . ಅದು ಅರುಹಿಸಿಕೊಳ್ಳುವ ನಾಮರೂಪದ ಭಾಷೆಯು ಅಲ್ಲ, ಇತ್ತ ಅರಿಯುವ ದೃಕ್‌ಸಾಕ್ಷಿ ಅಸಂಗನೆಂಬ ಭಾಷೆಯು ಅಲ್ಲ .

ಇವೆರಡಕ್ಕೂ ಸಮವಾಗಿಹ ಭಾಷೆ. ಸಮತೆ ಸಯವಾಗಿಹ ಭಾಷೆ . '' ಗುರುವ ನರಿಯಲು ಅಷ್ಟಾದಶ ವಿದ್ಯೆಯನರಿಯಲುಂಟು; ಓದಲುಂಟು ಕೇಳಲುಂಟು ಹೇಳಲುಂಟು. ಗುರು ಕರುಣೆಯಿಂದ ಗುರುವನರಿದ ಬಳಿಕ ಗುರುವಲ್ಲದೆ ತಾನಿಲ್ಲ, ತಾನಿಲ್ಲಾಗಿ ಓದಲಿಲ್ಲ, ಓದಲಿಲ್ಲಾಗಿ ಕೇಳಲಿಲ್ಲ , ಕೇಳಲಿಲ್ಲಾಗಿ ಹೇಳಲಿಲ್ಲ, ಹೇಳಲಿಲ್ಲಾಗಿ ಅರಿಯಲಿಲ್ಲ , ಅರಿಯಲಿಲ್ಲದ ಅರುವ ನರುಹಿಸಿದ ಗುರುವ ನರಿಯಲುಂಟೆ ? ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ. '' ಇದು ಅರಿಯಲಿಲ್ಲದ ಅರುವರಿತು ಅರಿಯದರುವೆ ತಾನಾಗಿಹ ಭಾಷೆ, ಜನನ ಮರಣಂಗಳಲ್ಲಿ ಬರಸಬಾರದ ಭಾಷೆ .

ಇದು ಅರಿವ ಅರುಹಿಸಿಕೊಂಬ ಈ ಉಭಯಂಗಳ ನಷ್ಟ ಮಾಡಿ, ಅರಿಯ ಬಾರದ ಘನವರಿತು ಅರಿಯದಂತಿದ್ದ ಭಾಷೆ. ಅರುಹಿಸಿಕೊಂಬುದು. ಅರಿಯದಂತಿದ್ದ ಭಾಷೆ , ಅರಿವುದನ್ನು ಅರಿಯದಂತಿದ್ದ ಭಾಷೆ , ತಾ ಓದದವನಾದ ಭಾಷೆ , ತಾ ಕೇಳದವನಾದ ಭಾಷೆ , ತಾ ಹೇಳದವನಾದ ಭಾಷೆ .

ಇದು ಜನನ ಮರಣಂಗಳಲ್ಲಿ ಬರಸಬಾರದ ಭಾಷೆ. ನಿತ್ಯ ನೀನೆಂದು ಮರೆ ಹೊಕ್ಕ ಕಾರಣ ಇಹಪರದಲ್ಲಿ ಇರಿಸ ಬಾರದ ಭಾಷೆ . ಗುರು ಲಿಂಗವ ಇದಿರಾಗಿ ಕಂಡವಂಗೆ ಗುರು ದ್ರೋಹ ತಪ್ಪದೆಂದು ನೀನು ಸ್ವಯಂ ಜ್ಯೋತಿರ್ಲಿಂಗವೆಂದು ಇದರಲ್ಲಿ ಸದಾ ಸಂಶಯಗೊಂಡವಂಗೆ ಲಿಂಗದ್ರೋಹ ತಪ್ಪದೆಂದು. ಜಂಗಮ ಲಿಂಗವೆಂದು ಭಾವಿಸಿ, ಅದು ಭಾವಕ್ಕಗಮ್ಯವಾದುದನ್ನು ಭಾವಕ್ಕೆ ತಂದು ಭಾವಿಸಿದಲ್ಲಿ , ಜಂಗಮ ದ್ರೋಹ ತಪ್ಪದೆಂದು.

ಇಂತಪ್ಪ ಗುರುರೂಪಿ ಮಹಾಲಿಂಗವ ತನಗೆ ಬೇರಾಗಿ ತನ್ನಿಂದ ಅರುಹಿಸಿ ಕೊಂಬುದಾಗಿ ಕಂಡಡೆ ಮಹಾದ್ರೋಹವೆಂದು ; ಭಯಹುಟ್ಟಿ ನಡು ನಡುಗಿ ಶರಣೆಂದು, ಶರಣಯ್ಯ ಶರಣುವರೇಣ್ಯ , ಭಕ್ತವರೇಣ್ಯ , ಗುರುವರೇಣ್ಯ ಶರಣು, ಶರಣು ಜಯ ಜಯ ಜಯತು.

**ನಿತ್ಯನೀನೆಂದು ಮರೆಹೊಕ್ಕ ಕಾರಣ ಇಹ ಪರದಲ್ಲಿ ಇರಿಸಬಾರದ ಭಾಷೆ :** ಕರುಣಿಸು ನನ್ನಯ್ಯ ಇಹಪರದಲ್ಲಿ ಇರಿಸಬಾರದ ಭಾಷೆ, ಇದು ಇಹಪರ ಕಾಣದ ಭಾಷೆ, ಇಹ ಪರವ ನಷ್ಟವಾಗಿ ಕಂಡ ಭಾಷೆ.

ನಾಮರೂಪ ಸತ್ಯವಾಗಿ ಕಂಡುದು ಇಹದ ಭಾಷೆ, '' ಮೊಲೆ ಮುಖವ ಕಂಡು ಹೆಣ್ಣೆನ್ನಬಹುದೆ ? ಗಡ್ಡ ಮೀಸೆಗಳ ಕಂಡು ಗಂಡೆನ್ನ ಬಹುದೆ ? ಬಾರದು ಒಳಗೆ ಸುಳಿವ ಆತ್ಮ ಗಂಡು ಅಲ್ಲ ಹೆಣ್ಣು ಅಲ್ಲ ಕಾಣಾ ರಾಮನಾಥಾ '' ಎಂದು ಹೇಳಿದ ಭಾಷೆ.

ಮೊಲೆ ಮುಖವ ಕಾಣದೆ , ಗಡ್ಡ ಮೀಸೆಯ ಕಾಣದೆ, ಅಸ್ತಿ ಭಾತಿ ಎಂಬ ಪರಮ ಸತ್ಯವ ತಿಳಿಯುವದೆ ಇಹ ಪರದಲ್ಲಿ ಇರಿಸ ಬಾರದ ಭಾಷೆ. ಇದು ನಾಮ ರೂಪವಾದುದ ಅರಿಯದು. ಅಂಡಜವಾದುದು ಅರಿಯದು. ಪಿಂಡಜವಾದುದು ಅರಿಯದು. ಸಾಕಾರವೆಂದು ನಿರಾಕಾರವೆಂದರಿಯದು. ಸಂಗ ನಿಸ್ಸಂಗವೆಂದು ಅರಿಯದು. ಸಂಗಯ್ಯನಲ್ಲಿ ಇದು ಸ್ವಯಲಿಂಗವಾದುದು. ಅರಿಯಲಿಲ್ಲದ ಅರುವೆಂದು ಅರಿತು, ನಾಮರೂಪವ ಅರಿಯದಂತಿದ್ದುದು. ಇಹಪರದಲ್ಲಿ ಇರಿಸ ಬಾರದ ಭಾಷೆ.

ತೆರಹಿಲ್ಲದ ಲಿಂಗ ಭರಿತವೆಂಬ ಗುರು ಕಾರುಣ್ಯವಿಡಿದು ಅರಿದರಿದುದರಿಂದ, ಒಳಗೆ ಅರಿಯೆ ಹೊರಗೆ ಅರಿಯೆ ಭಾವವನರಿಯೆ ನಿರ್ಭಾವವನರಿಯೆ, ಶೂನ್ಯವ ಅರಿಯೆ ನಿಶೂನ್ಯವ ಅರಿಯೆ, ತೆರಹಿಲ್ಲದಭವನ ಹೊರತಾಗಿ ನಾನೊಂದು ಅರಿಯೆ ನೆಂಬುದು ಇಹ ಪರದಲ್ಲಿ ಇರಿಸ ಬಾರದ ಭಾಷೆ.

**ತನ್ನಲ್ಲಿ ತನಗೆ ವಿವರಣೆ ಇಲ್ಲದ ಕಾರಣ ಪುಣ್ಯಪಾಪಂಗಳ ಉಣಿಸಬಾರದ ಭಾಷೆ :** ತೆರಹಿಲ್ಲದಭವ ನುಡಿಗೆಡೆಗೊಡನೆಂಬುದು ತನ್ನಲ್ಲಿ ತನಗೆ ವಿವರಿಸುವದು ವರ್ಣಿಸುವದು ತೆಗಳಲು ಹೊಗಳಲು ಬರದ ಕಾರಣ ಪುಣ್ಯ ಪಾಪಂಗಳ ಉಣಿಸ ಬಾರದ ಭಾಷೆ ! ಇದು ತೆರಹಿಲ್ಲದ ಮಹಾಘನನಾಗಿಹ ಭಾಷೆ.

'' ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ವಿಶ್ರಾಮ, ತೆರಹಿಲ್ಲದ ಗಂಭೀರ, ಸುಖದ ಸುಖ, ತೆರಹಿಲ್ಲದ ಮಹಾಮಹಿಮ ಕೂಡಲ ಚೆನ್ನಸಂಗಾ ನಿಮ್ಮ ಶರಣ. '' ಶರಣಂಗೆ ಶುಭ ಕ್ರಿಯೆಯು ಇಲ್ಲ ಅಶುಭ ಕ್ರಿಯೆಯು ಇಲ್ಲ.

ತಾನು ನಿಷ್ಕಳಂಕ ನಿಷ್ಕ್ರಿಯ, ಅತೀಂದ್ರಿ ಒಡಲಳಿದವನು, ಶುಭ ಕ್ರಿಯೆ ಅರಿಯದವನು, ಅಶುಭ ಕ್ರಿಯೆ ಅರಿಯದವನು , ಅರಿಯಲಿಲ್ಲದ ಅರುವೆ ತಾನಾಗಿ ಲಿಂಗವಾಗಿ ನೋಡಿದ ನೋಟ. ಲಿಂಗವಾಗಿ ನಡೆದ ನಡೆ . ತಾನೆ ಲಿಂಗವಾಗಿ ನಿಂತ ನಿಜ ಧಾಮ. ಇದು ತೆರಹಿಲ್ಲದ ವಿಶ್ರಾಮ.

ಅರಿವ ಅರುಹಿಸಿಕೊಂಬುದಕ್ಕೂ ಅವಕಾಶ ಕೊಡದೆ, ಅರಿಯಲಿಲ್ಲದ ಅರುವೆ ತಾನಾಗಿ ನಿಂತುದು. ತೆರಹಿಲ್ಲದ ಗಂಭೀರ ; ಸುಖದೇಕರಸದ ಸುಖವು ಲಿಂಗನೋಟ ಲಿಂಗನಡೆ ಪುಣ್ಯ ಪಾಪಂಗಳ ಉಣಿಸಬಾರದ ಭಾಷೆ ಎಂದು ಹೇಳಿಹಳು.

**ತನ್ನ ಪಾದೋದಕ ಪ್ರಸಾದ ಜೀವಿಯಾಗಿ ತಾ ಸಹಿತ ನಾನಿಪ್ಪೆ ನಾ ಸಹಿತ ತಾನಿಪ್ಪ ಕಾರಣ ವಂಚನೆ ಬಾರದು, ಎನಗೆ ತನಗೆ :** ತನ್ನ ಪಾದೋದಕ ಪ್ರಸಾದ ಜೀವಿಯಾದ ಘನವ ನೇನೆಂಬೆ ? ತನ್ನ ಪಾದೋದಕ ಜ್ಞಾನೋದಕ, ಜ್ಞಾನಾನುಭವ ! ಇದು ತೆರಹಿಲ್ಲದ ಲಿಂಗಭರಿತವೆಂಬ ಅರುವಿಡಿದು ಅರಿದರಿದು ತನ್ನಿಂದ ತನಗಾದ ಜ್ಞಾನಾನುಭವ, ಸ್ವಯಾನುಭಾವ . ತನ್ನಿಂದ ತಾನೆ ತನಗೆ ತೆಗೆದುಕೊಂಡ ತನ್ನ ಪಾದೋದಕ . ಇದು ತೆರಹಿಲ್ಲದಭವನ ಪಾದೋದಕ.

ನುಡಿಗೆಡೆಗೊಡದ ಪಾದೋದಕ. ಅಲ್ಲಿಯ ಆಚಾರ ಅಗೋಚರವಾದುದು. ಒಡಲು ನಷ್ಟ , ಕಲ್ಪಿತ ಪುರುಷನೆ ನಷ್ಟವಾಗಿ ಕಲ್ಪನಾರಹಿತವಾಗಿಹ ತನ್ನಿರುವು ಆದುದು. ತನ್ನಿಂದ ತನಗೆ ವೇದ್ಯವಾದುದೆ ತನ್ನ ಅನುಭಾವ, ಸ್ವಸ್ವರೂಪದ ಅನುಭವ, ತನ್ನಿಂದ ತನಗೆ ತಿಳಿದಿಹುದೆ ಎಂದು ತಿಳಿವುದು.

'' ಸ್ಥಲವೆನ್ನೆ , ನಿಸ್ಥಲವೆನ್ನೆ ನಿರ್ಣಯವೆನಗಾದ ಬಳಿಕ, ನಾನೊಂದು ಅರಿಯೆನಯ್ಯ ಕೂಡಲ ಚೆನ್ನಸಂಗಯ್ಯ ಲಿಂಗಕ್ಯವೆಂದೆನ್ನೆ ಸ್ಥಲದಿಂದ ನಡೆ ನುಡಿಯಾಯಿತ್ತು. ನಿಸ್ಥಲದಿಂದ ನಡೆ ನುಡಿ ಕೆಟ್ಟಿತ್ತು. ನೋಡಲೊಡನೆ ಸ್ಥಲವಾಗಿ ತೋರಿತ್ತು. ಆರಯ್ಯಲೊಡನೆ ನಿಸ್ಥಲವಾಗಿ ತೋರಿತ್ತು. ಸ್ಥಲವೂ ಅಲ್ಲ. ನಿಸ್ಥಲವೂ ಅಲ್ಲ . ನೋಟವೆ ಕೂಟ ಕೂಡಲ ಚೆನ್ನಸಂಗಯ್ಯ ತಾನೆ ಬಲ್ಲ . '' ತನ್ನ ಪಾದೋದಕ ಪ್ರಸಾದ ಜೀವಿಯಾಗಿ ಅರಿಯಲಿಲ್ಲದ ಅರುವರಿತ ಸ್ವಯಾನುಭವ. ಇದು ತನ್ನ ಪಾದೋದಕ, ಅರಿಯಲಿಲ್ಲದ ಅರುವೆ ತನ್ನಿರುವಾಗಿ ತಾನಾದುದು. ಅದು ಪ್ರಸಾದ ಜೀವರೂಪ ಮಹಾಶರಣನ ಹೃದಯದಲ್ಲಿ ತೆರಹಿಲ್ಲದಭವ. ತಾ ಸಹಿತ ನಾನಿಪ್ಪೆ , ನಾ ಸಹಿತ ತಾನಿಪ್ಪ ಕಾರಣ ಎನಗೆ ತನಗೆ ವಂಚನೆ ಬಾರದು ಎಂದು ಹೇಳಿಹರು.

**ಶಂಭುಜಕ್ಕೇಶ್ವರನ ಸದ್ಗುರು ಅಪ್ಪಣೆಯಿಂದ ನೀನೊಲಿದು ಸಲಹು ಎನ್ನ ಪ್ರಾಣಲಿಂಗವಾಗಿ :** ಸದ್ಗುರು ಅಪ್ಪಣೆ ಅರಿಯಲಿಲ್ಲದ ಅರುವ ನರುಹಿಸಿದ ಕಾರಣ ಆ ಮಹಾಂತನ ಅಪ್ಪಣೆಯಿಂದ ತೆರಹಿಲ್ಲದಭವನ ಹೃದಯವಾಗಿ ನೀನೊಲಿದು ಸಲುಹಿದ ಕಾರಣ ಪ್ರಾಣಲಿಂಗವಾಗಿದೆ ಎಂದು ತಿಳಿಯುವೆನು ಎಂದು ಹೇಳಿಹಳು.



# ಜ್ಞಾನ ನುಡಿಗೆಡೆಗೊಡದ ನೆಲೆ ; ಪ್ರಾಣಕ್ಕಾಧಾರ

**ಜಾಣಾನುಭಾವಿಯೆಂಬ ಪಿನಾಕಿಯ ಮಾತ ಕೇಳಿ ಬಂದೆ.**
**ಹಿರಿದು ಆರತದಿಂದ ಕಾಣಿಸುವನ್ನಕ್ಕರ ತವಕ ,**
**ನುಡಿಗೆಡೆಗೊಡದ ನೆಲೆಗೆ ಪ್ರಾಣಕ್ಕಾಧಾರ**
**ಶಿವ ಶಿವಾ ಎಂಬ ಶಬುದ. ಆತನ ಕಂಡಡೆ ಕಡೆಯದ ಕೀಲು ಕಳೆದಂತೆ.**
**ಶಂಬುಜಕ್ಕೇಶ್ವರನ ಬೆರಸಲೊಡನೆ ಬೆರಗಾದೆನು.**

**ತಾತ್ಪರ್ಯ : ಜಾಣಾನುಭಾವಿಯೆಂಬ ಪಿನಾಕಿಯ ಮಾತ ಕೇಳಿ ಬಂದೆ :** ಜಾಣಾನುಭಾವಿಯೆಂಬ ಶಿವನ ಮಾತು ಕೇಳಿ ಬಂದುದು ನೋಡಿರೆ ! ''ಅಯ್ಯ ತನ್ನ ತಾನರಿದಡೆ ತಾನೆ ಭಕ್ತ, ತಾನೆ ಮಹೇಶ್ವರ ಪ್ರಸಾದಿ, ಪ್ರಾಣಲಿಂಗಿ ಶರಣ ಐಕ್ಯ ನೋಡಾ. ತನ್ನಿಂದಧಿಕಮಪ್ಪ ಘನವಿಲ್ಲಾಗಿ ಷಡಸ್ಥಲ ಬ್ರಹ್ಮ ತಾನೆ. ನಾದ ಬಿಂದು ಕಲಾತೀತ ಮಹಾಘನ ಲಿಂಗೈಕ್ಯ ತಾನಲ್ಲದೆ ಮತ್ತಾರುಂಟು ಹೇಳಾ ? ಅಪ್ರಮಾಣ ಅಗೋಚರ ಅಗಮ್ಯ ಕೂಡಲ ಸಂಗಮದೇವಾ. ''

''ಅಯ್ಯ ತನ್ನ ನಿಜದಲ್ಲಿ ತಾ ನಿಂದು ನೋಡಿದಡೆ ತಾನೆ ಇಷ್ಟಲಿಂಗ, ಪ್ರಾಣಲಿಂಗ, ಭಾವ ಲಿಂಗ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಃಕಳ ಂಕಲಿಂಗ, ನಿರಂಜನ ಲಿಂಗ, ನಿಶೂನ್ಯಲಿಂಗ, ಅಣು ಮಹದಣು ಪರಮಾಣು ಜ್ಯೋತಿರ್ಮಯಲಿಂಗ ಪ್ರಭು ನೋಡಾ. ಅಪ್ರಮಾಣ ಅಗೋಚರ ಕೂಡಲಸಂಗಮದೇವಾ.'' ''ತನ್ನ ನಿಜಾಚರಣೆಯಲ್ಲಿ ನಿಂದು ನೋಡಿದಡೆ ; ತಾನೆ ಗುರು ತತ್ವ, ತಾನೆ ಚರತತ್ವ ಪರತತ್ವವಲ್ಲದೆ ಬೇರೆ ಪರಬ್ರಹ್ಮ ಉಂಟೆಂ ಬ ಭ್ರಾಂತು ಭ್ರಮಿತರ ನಾನೇನೆಂಬೆನಯ್ಯ ಅಪ್ರಮಾಣ ಅಗಮ್ಯ ಅಗೋಚರ ಕೂಡಲ ಸಂಗಮದೇವಾ.''

ಜಾಣಾನುಭಾವಿ ಶಿವನ ಮಾತು ಕೇಳಿ ಬಂದುದು ನೋಡಿರೆ ? ತನ್ನ ತಾ ನರಿದಾತ ತಾನೆ ಭಕ್ತ ತಾನೆ ಮಹೇಶ್ವರ, ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ನೋಡಾ. ತನ್ನ ತಾನರಿದಾತ ಮಹಾಘನ ಲಿಂಗೈಕ್ಯ ಷಟಸ್ಥಲ ಪರಬ್ರಹ್ಮ ತಾನೆ. ತನ್ನಿಂದಧಿಕ ವಸ್ತು ಮಹಾಘನವಿಲ್ಲಾಗಿ ಎಂದು ಬಿತ್ತರಿಸಿದುದು ನೋಡಿದಡೆ ತನ್ನ ತಾನರಿದಾತ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವನರಿ ದಾತ. [1] ''ಎಲ್ಲಾ ಎಲ್ಲವನರಿವವರುಂಟು ತನ್ನ ತಾನರಿವವರುಂಟೆ ? ಅರಿದಿಹೆ ನೆಂಬುದು ಮದ ನೋಡಾ ಅದು ಚಿದಹಮ್ಮು ! ನಿರ್ಧರಿಸಿಹೆನೆಂಬುದು ಅನುಭವದ ಮದ ನೋಡಾ. ಅರಿದರುಹಿಸಿ ಕೊಂಬುದಕ್ಕೆ ಮೀರಿದ ಘನವನರಿವ ಪರಿ ಎಂತಯ್ಯ? ಇದು ಕಾರಣ ನಿರಂಜನ ಪ್ರಭು ನಾಗೇ ಶ್ವರಾ ನಿನ್ನ ವರ ಪ್ರಸಾದ ದನುವಿನಗಮ್ಯ ಅಗಾಧವನುಪಮಿಸಬಹುದೆ ?ನಿರುಪಮ ನೋಡಾ ''[1] ಎಂದು ಬಿತ್ತರಿಸಿದುದು ನೋಡಿದಡೆ ಅರಿದೆನೆಂಬರಿವು ತನ್ನಿರುವಲ್ಲ . ಅದು ಚಿದಹಮ್ಮು. ನಿರ್ಧರಿ ಸಿಹೆನೆಂಬುದು ಚಿದಾಭಾಸನ ಇರುವು . ಅರಿತೆ ಅನುಭವಿಸಿದೆ ಎಂಬುದು ಕಲ್ಪಿತನಾದವನ ಜ್ಞಾನ, ಕಲ್ಪನಾರಹಿತನಾದವನ ಇರವು ಆಗದು. ಕಲ್ಪನಾರಹಿತ ಇರುವು ಅರಿಯಬಾರದ ಘನವರಿತು ಅರಿ ಯದಂತಿದ್ದ ಹಿರಿಮೆ.

ಅದು ಅರಿಯಲಿಲ್ಲದ ಅರುವ ಅವಗ್ರಹಿಸಿ ಅರಿಯಲಿಲ್ಲದ ಮರೆಯಲಿಲ್ಲದ ನಿಜದಲ್ಲಿ

ನಿಂದ ಹಿರಿಮೆ. ಇದುವೆ ತನ್ನ ನಿಜದಲ್ಲಿ ತಾನು ನಿಂದು ನೋಡಿದುದು.

ಅರಿವ ಅರುಹಿಸಿಕೊಂಬ ಈ ಉಭಯ ವೆರಡನ್ನು ಅರಿಯಲಿಲ್ಲ, ಅರಿಯಬಾರದ ಘನದಿರುವು ಮರೆಯಲಿಲ್ಲ ; ಅರಿಯಲಿಲ್ಲದ ಅರುವು ತಾನಾಗಿದ್ದುದು ಅದುವೆ . ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ ಅರಿಯಲಿಲ್ಲದ ಅರುವೆ ತನ್ನಿರುವು ಆದುದು ಆಚಾರಲಿಂಗ ; ಅದುವೆ ಗುರುಲಿಂಗ; ಗುರುಶಿಷ್ಯರ ಮಧ್ಯದಲ್ಲಿದ್ದ ಗುರುಲಿಂಗ ಗುರುವೆಂದರಿಯದ ಗುರುಲಿಂಗ . ಶಿಷ್ಯನೆಂದರಿಯದ ಗುರುಲಿಂಗ, ಅದುವೆ ಮನ ವರಿಯದ ಶಿವಲಿಂಗ. ಅಕಲ್ಪಿತ ಘನವು ಭರಿತಭಾವ ಅದು ಭಾವಲಿಂಗ . ಇದು ಭಾವಕ್ಕಗಮ್ಯವಾಗಿಹ ತನ್ನಿರುವು ಕರಗತವಾಗಿ, ಚರಿಸಿ ಚರಿಸದಂತಿಪ್ಪುದೆ ಜಂಗಮಲಿಂಗ; ಅರಿಯಲಿಲ್ಲದ ಅರುವು ತಾನಾಗಿ ಅರಿಯದಂತಿದ್ದುದು ಪ್ರಸಾದ ಲಿಂಗ. ಶಬ್ದವೆ ಮೀಸಲಾಗಿ ಶಬ್ದ ಮುಗ್ಧನಾದುದು ಮಹಾಲಿಂಗ.

ತಾನೆ ಅಣು, ತಾನೆ ಮಹ, ತಾನೆ ಸಕಲ, ತಾನೆ ನಿಃಕಲ, ತಾನೆ ತಾನಾದುದು. ತಾನೆ ಗುರುತತ್ವ ನಿರುಪಮ .ತತ್ವ ನಿರಾಲಂಬ ತತ್ವ, ನಿರ್ಮಾಯತತ್ವ, ನಿರಂತರ ತತ್ವ ನಿರಂತರವಾಗಿಹ ಘನದಿರುವು ತಾನೆ . ತಾನೆ ತತ್ವ ಪರತತ್ವವಲ್ಲದೆ ಬೇರೆ ಪರಬ್ರಹ್ಮ ಉಂಟೆ ?

ತಾನು ನಿಜವೆನ್ನದೆ, ಅಖಂಡಿತನೆನ್ನದೆ ಅಚಲಿತ ನೆನ್ನದೆ, ಏನೂ ಎನ್ನದೆ ಶಬ್ದ ಮುಗ್ಧನಾದುದು ತನ್ನ ನಿಜದಿರುವಿನಲ್ಲಿ ನಿಂತ ನಿಜಾಚರಣೆಯಲ್ಲಿ ನಿಂದು ನೋಡಿದುದು ಇಂತಪ್ಪ ಜಾಣಾನುಭಾವಿಯ ಶಿವನ ಮಾತು ಕೇಳಿ ಬಂದೆ ಎಂದು ಹೇಳಿಹಳು.

**ಹಿರಿದು ಆರತದಿಂದ ಕಾಣೆಸುವನ್ನಕ್ಕರ ತವಕ :** ಹಿರಿದಾದ ನಿಜ ಸುಖವ ಕಾಣುವ ತವಕ ಅತಿ ಪ್ರೀತಿ, ಅತಿ ಆತುರ, **ನುಡಿಗೆಡೆಗೊಡದ ನೆಲೆ ಪ್ರಾಣಕ್ಕಾಧಾರ ಶಿವ ಶಿವಾ ಎಂಬ ಶಬುದ ಆತನ ಕಂಡಡೆ ಕಡೆಯಕೀಲು ಕಳೆದಂತೆ** : ಹಿರಿದು ಪ್ರೀತಿ. ಅತಿ ಆತುರದಿಂದ ಆತನ ಕಂಡಡೆ ನುಡಿಗೆ ಅವಕಾಶ ಕೊಡದಂತಿರುವ ತನ್ನ ಕಂಡುದು. ತಾನೆ ಭರಿತ. ನುಡಿನುಡಿಗೂ ತನ್ನಿರುವು ತಾನೆ .

ಎಲ್ಲೆಲ್ಲೂ ತಾನೆ, ಒಳಹೊರಗೆನ್ನದೆ ತಾನೆ, ಶಬ್ದ ಅಪಶಬ್ದ ಎಂದಲ್ಲಿ ತಾನೆ, ಅಂಗ ಲಿಂಗ ಎಂದಲ್ಲಿ ತಾನೆ. ಅಂಗದಲ್ಲಿ ಭರಿತ ಲಿಂಗದಲ್ಲಿ ಭರಿತ ಈ ಭರಿತ ರಹಸ್ಯವ ತಿಳಿದಲ್ಲಿ ಒಳಹೊರಗೆಂಬುದಕ್ಕಿಂಬಿಲ್ಲ ಶಬ್ದ ಅಪಶಬ್ದವೆಂಬುದಕ್ಕಿಂಬಿಲ್ಲ, ಅಂಗಲಿಂಗವೆಂಬುದಕ್ಕಿಂಬಿಲ್ಲ, ನಿರ್ನಾಮವಾಯಿತ್ತು. ಹೇಳಲೆಂತು ಬಾರದು, ಕೇಳಲೆಂತು ಬಾರದು, ಎಂತಿರ್ದಂತೆ ತನ್ನಿರುವು ತನಗೆ ವೇದ್ಯವಾಗಿ ಪ್ರಾಣಕ್ಕಾಧಾರ ಶಿವ ಶಿವಾ. ಪ್ರಾಣಕ್ಕಾಧಾರ ವಾದುದು ಶಿವ ಶಿವಾ ಈ ಶಬುದ ಶಬ್ದಮುಗ್ಧ ಶಬುದ.

ಶಿವ ಶಿವನೆನ್ನದ ಶಿವ. ಶಿವನೆಂದಲ್ಲಿ ತಪ್ಪಿತ್ತು ಶಿವನೆನ್ನದಿದ್ದಲ್ಲಿ ಶಿವ ತಾನಾಯಿತ್ತು. ಆಗ ತೆರಹಿಲ್ಲದಭವ ನುಡಿಗೆಡೆಗೊಡದವನ ಕಂಡುದು. ಕಂಡಲ್ಲಿ ಕಡೆಯ ಕೀಲು ಕಳೆದಂತೆ ಕರ್ತೃತ್ವ ಭೋಕ್ತೃತ್ವವೆಂಬುದು ಕಡೆಯಕೀಲು ಕಳೆದಂತೆ ಎಂದಲ್ಲಿ ಅಹಂಕಾರವ ನಷ್ಟವಾದಂತೆ, ಕಲ್ಪನಾರಹಿತವಾಗಿಹ ಘನದಿರುವು ತಾನಾದಂತೆ ಎಂದು ತಿಳಿವುದು.

**ಶಂಭುಜಕ್ಕೇಶ್ವರನ ಬೆರಸಲೊಡನೆ ಬೆರಗಾದೆನು :** ಸುಖದ ಸುಖ ಸ್ವರೂಪ ಶಂಭುಜಕ್ಕೇಶ್ವರ ಇಂತಪ್ಪ ಸುಖವ ಸುಖಿಸಿ ಬೆರಗಾದೆನು ಎಂದು ಹೇಳಿಹಳು.



1.ವಿದ್ಯಾನಂದ ಶರಣರ ವಚನ

# ಜ್ಞಾನವೆ ತಂದೆ ತಾಯಿ

**ತಲೆಯಮೇಲೆ ತಲೆ ಉಂಟೆ? ಹಣೆಯಲ್ಲಿ ಕಣ್ಣುಂಟೆ ?**
**ಗಳದಲ್ಲಿ ವಿಷವುಂಟೆ? ದೇವರೆಂಬವರಿಗೆಂಟೊಡಲುಂಟೆ?**
**ತಂದೆಯಿಲ್ಲದವರುಂಟೆ? ತಾಯಿಯಿಲ್ಲದವರುಂಟೆ?**
**ಎಲವೋ ನಿನ್ನ ಹಣೆಯಲ್ಲಿ ನೇಸರು ಮೂಡದೆ?**
**ಶಂಭುಜಕ್ಕೇಶ್ವರನಲ್ಲದೆ ಉಳಿದ ದೈವಂಗಳುಂಟೆ?**

**ತಾತ್ಪರ್ಯ :** ಶರಣರು ದಿಟವ ತಿಳಿದವರು. ದಿಟವೆ ಆದವರು ಸಟೆಗೆ ಒಪ್ಪದವರು. ದಿಟವದು ನಿರಂತರ. ಸಟೆ ಅದು ಸಟೆಯು. ಅದು ಇದ್ದುದೆಂತು? ಇಲ್ಲದುದು ಇದ್ದಂತಾಗಿ ತೋರುವದು. ಹಗ್ಗದಲ್ಲಿ ಹಾವು ಕಂಡಂತೆ. ಹಗ್ಗವದು ದಿಟ, ಹಗ್ಗದಲ್ಲಿ ಹಾವು ಕಂಡುದು ಸಟೆಯು. ಹಾಗೆ ನಿರಂತರವಾಗಿಹ ಮಂಗಲಮಯದಲ್ಲಿ ಇಲ್ಲದುದು ಕಂಡಂತಾದುದು ಸಟೆಯು. ಶಂಭುಜಕ್ಕೇಶ್ವರನು ದಿಟ , ಉಳಿದ ದೈವಂಗಳು ಸಟೆಯು.

''ಅಮೃತವತಿ ಸೋಮ ಶಂಭುವಿಂಗೆ ಹುಟ್ಟಿದಾತ ಇಂದ್ರ. ಸತ್ಯ ಋಷಿ ಜೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ. ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು , ನಾಭಿರಾಜ ಮರುತಾ ದೇವಿಗೆ ಹುಟ್ಟಿದಾತ ರುದ್ರ . ಇವರೆಲ್ಲ ಯೋನಿಜರೆಂಬುದು ತ್ರೈಜಗವೆಲ್ಲ ಬಲ್ಲದು. ಉತ್ಪತ್ತಿ ಸ್ಥಿತಿ ಲಯಕ್ಕೆ ಹೊರಗಾದಾತ ನಮ್ಮ ಕೂಡಲಸಂಗಮದೇವರಿಗೆ ಮಾತಾ ಪಿತೃಗಳುಂಟೆ ? ''

''*ಅಸುರ ಮಾಲೆಗಳಿಲ್ಲ , ತ್ರಿಶೂಲ ಡಮರುಗವಿಲ್ಲ , ಬ್ರಹ್ಮ ಕಪಾಲವಿಲ್ಲ , ಭಸ್ಮ ಭೂಷಣನಲ್ಲ , ವೃಷಭ ವಾಹನನಲ್ಲ, ಋಷಿಗಳೊಡನಿರ್ದಾತನಲ್ಲ ಎಸುಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೆಂದನಂಬಿಗರ ಚೌಡಯ್ಯ*'' ಬಿತ್ತರಿಸಿದಂತೆ ಸತ್ಯವರಿತ ಸತ್ಯಕ್ಕ ತಾಯಿ ನಿಜವರಿತ ನಿಜೈಕ್ಯಳು. ನಿಜಸುಖವೆ ತನ್ನ ಸ್ವಸುಖವಾಗಿಹ ಸ್ವಯಂಭುದೇವನಿಗೆ ತಲೆಯಮೇಲೆ ತಲೆ ಉಂಟೆ? ಹಣೆಯಲ್ಲಿ ಕಣ್ಣುಂಟೆ ? ಕಂಠದಲ್ಲಿ ವಿಷವುಂಟೆ ? ದೇವರೆಂಬವರಿಗೆ ಎಂಟು ಒಡಲುಂಟೆ ? ತಂದೆ ಇಲ್ಲದವರುಂಟೆ? ತಾಯಿ ಇಲ್ಲದವರುಂಟೆ? ಎಲವೋ ನಿನ್ನ ಹಣೆಯಲ್ಲಿ ಕಣ್ಣು ಮೂಡಿದೆಯೆ? ನಮ್ಮ ಶಂಭುಜಕ್ಕೇಶ್ವರನೆ ದೇವನು. ಉಳಿದವುಗಳು ದೇವನಾಗ ಬಲ್ಲವೆ ? ಎಂದು ನಿಜವಾದ ದೇವನ ಪರಿಚಯ ಮಾಡಿ ತೋರಿಸಿಹಳು.

ಇಂದ್ರನು ದೇವನೆಂದರೆ ಅವನಿಗೂ ತಂದೆ ಉಂಟು ತಾಯಿ ಉಂಟು ಅಮೃತವತಿ ಎಂಬ ತಾಯಿ ಉಂಟು ಸೋಮಶಂಬುವೆಂಬ ತಂದೆ ಉಂಟು. ಬ್ರಹ್ಮನು ದೇವನೆಂದಲ್ಲಿ ಅವನಿಗೂ ಸತ್ಯ ಋಷಿ ಎಂಬ ತಂದೆ ಉಂಟು, ಜೇಷ್ಠಾದೇವಿ ಎಂಬ ತಾಯಿ ಉಂಟು, ಇವರುಗಳಿಗೆ ಹುಟ್ಟಿದಾತ ಬ್ರಹ್ಮನಾಗಿಹನು. ವಿಷ್ಣುದೇವನೆಂಬೆನೆ? ವಸು ದೇವ ತಂದೆ ದೇವಕಿ ತಾಯಿ ಇವರಿಗೆ ಹುಟ್ಟಿದಾತ ವಿಷ್ಣು . ರುದ್ರ ದೇವನೆಂಬನೆ? ನಾಭಿರಾಜ ತಂದೆ ಮರುತಾದೇವಿ ತಾಯಿ ಇವರಿಗೆ ಹುಟ್ಟಿದಾತ. ಹೀಗೆ ಇವರುಗಳು ಹುಟ್ಟಿದವರು, ಯೋನಿಜರು.

ದೇವನಿಗೆ ತಲೆಯ ಮೇಲೆ ತಲೆ ಇದೆಯೆ ? ಹಣೆಯಲ್ಲಿ ಚಂದ್ರನಿಹನೆ? ಕಂಠವಲ್ಲಿ ವಿಷ

ವಿದೆಯೆ? ದೇವನಿಗೆ ಎಂಟು ಒಡಲಿವೆಯೆ? ದೇವನಾದವನಿಗೆ ತಂದೆ ಇಲ್ಲವೆ? ತಾಯಿ ಇಲ್ಲವೆ? ನಿನ್ನ ಹಣೆಯಲ್ಲಿ ಚಂದ್ರ ನಿದ್ದಾನೆಯೆ? ಇವರುಗಳಾರು ದೈವಂಗಳಲ್ಲ, ಅಪ್ರಮಾಣ ಅಗಮ್ಯ ಅಗೋಚರ ಶಂಭುಜಕ್ಕೇಶ್ವರನಲ್ಲದೆ ಉಳಿದ ದೈವಂಗಳಲ್ಲವೆಂದು ಹೇಳಿಹರು.

*''ಬ್ರಹ್ಮ ವಿಷ್ಣಾದಿಗಳು ತಾನಿರ್ದಲ್ಲಿ, ರುದ್ರ ಈಶ್ವರ ತಾನಿರ್ದಲ್ಲಿ, ಸಚರಾಚರಂಗಳು ತಾನಿರ್ದಲ್ಲಿ, ಪಂಚಮುಖ ದಶಭುಜಗಳು ಸದಾಶಿವನು ತಾನಿರ್ದಲ್ಲಿ, ನಾಲ್ವತ್ತೆಂಟು ಸಾವಿರ ಮುನಿಗಳು ತಾನಿರ್ದಲ್ಲಿ ಮೂವತ್ತುಮೂರುಕೋಟಿ ದೇವತೆಗಳು ತಾನಿರ್ದಲ್ಲಿ, ಅಖಂಡ ಪರಿಪೂರ್ಣ ಮಹಾಘನ ನಲ್ಲದೆ ತನ್ನಿಂದಧಿಕವಪ್ಪ ಘನವಿಲ್ಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ '*

*''ಸ್ವರ್ಗಲೋಕ ತಾನಿರ್ದಲ್ಲಿ ಜ್ಯೋತಿರ್ಮಯ ಲೋಕ ತಾನಿರ್ದಲ್ಲಿ ಸಚರಾಚರಂಗಳೆಲ್ಲ ತಾನಿರ್ದಲ್ಲಿ ತನ್ನಿಂದಧಿಕವಪ್ಪ ದೈವ ಒಂದಿಲ್ಲವಾಗಿ ಇವೆಲ್ಲ ತನ್ನಾಧೀನ ವಲ್ಲದೆ ಅವರಾಧೀನ ತಾನಲ್ಲ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.''*

ಅಪ್ರಮಾಣ ಅಗಮ್ಯ ಅಗೋಚರನೆ ಶಂಭು ಜಕ್ಕೇಶ್ವರನು. ಅರಿದರಿದು ನೋಡಿದಡೆ ಅಪ್ರಮಾಣ ತಾನೆ, ಅಗಮ್ಯ ತಾನೆ, ಅಗೋಚರ ತಾನೆ, ಶಂಭು ಜಕ್ಕೇಶ್ವರ. ತಾನು ನಿರಂತರ ಇದ್ದವನು, ತಾನಿಲ್ಲದ ದೇಶವಿಲ್ಲ ಕಾಲವಿಲ್ಲ ವಸ್ತುವಿಲ್ಲ, ತಾನಿದ್ದಲ್ಲಿ ನುಡಿ ತಾನಿದ್ದಲ್ಲಿ ನಡೆ, ತಾನಿದ್ದಲ್ಲಿ ಗುರು ಲಿಂಗ ಜಂಗಮ ಪ್ರಸಾದ. ತಾನಿದ್ದಲ್ಲಿ ಷಡಸ್ಥಲ, ತಾನಿದ್ದಲ್ಲಿ ಅಷ್ಟಾವರ್ಣ, ತಾನಿದ್ದಲ್ಲಿ ಬ್ರಹ್ಮಾದಿಗಳು, ತಾನಿದ್ದಲ್ಲಿ ಈಶ್ವರ ಸದಾಶಿವ, ತಾನಿದ್ದಲ್ಲಿ ಸಕಲ ಮುನಿಗಳ ಸಮೂಹ, ತಾನಿದ್ದಲ್ಲಿ ಮೂವತ್ತು ಮೂರುಕೋಟಿ ದೇವತೆಗಳು, ತಾನಿದ್ದಲ್ಲಿ ದೇವಲೋಕ, ಮರ್ತ್ಯಲೋಕ ಸ್ವರ್ಗಲೋಕ ಪಾತಾಳಾದಿ ಹದಿನಾಲ್ಕು ಲೋಕಗಳು.

ಜ್ಯೋತಿರ್ಮಯ ಲೋಕ, ತಾನಿದ್ದಲ್ಲಿ , ಸಚರಾಚರಂಗಳೆಲ್ಲ ತಾನಿರ್ದಲ್ಲಿ, ತನ್ನಿಂದಧಿಕ ದೈವವಿಲ್ಲ, ತಾನೆ ಅಖಂಡ ಪರಿಪೂರ್ಣ ಮಹಾಘನನಲ್ಲದೆ ತನ್ನಿಂದಧಿಕವಪ್ಪ ಘನವಿಲ್ಲವಾದ್ದರಿಂದ ತಾನೆ ಅಪ್ರಮಾಣ ಅಗಮ್ಯನು. ಲಿಂಗ ಆದಿ, ಶರಣ ಅನಾದಿ ಎಂಬುದು ದಿಟ ದಿಟ ನೋಡಾ.

ಧ್ವನಿಯ ಮರೆಯಲ್ಲಿದ್ದುದ ತೋರಿದವರಾರು ಹೇಳಯ್ಯ? ಎನೆಂದೆನ್ನದ ಮುನ್ನ ಇದ್ದುದು, ಎನೆಂದೆನ್ನದ ಮುನ್ನ ತಾನೆಯಾಯಿತ್ತು ಎಂದು ಕರುಣಿಸಿದವರಾರು ಹೇಳಯ್ಯ? ನುಡಿಗೆಡೆಗೊಡದವನ ನುಡಿಗೆಡೆಗೊಡದವನೆಂದು ಕರುಣಿಸಿದವರಾರು ಹೇಳಯ್ಯ ? ಅರಿದರಿದು ನೋಡಿದ ಸಾಧು ಸಜ್ಜನ ಸದ್ಭಕ್ತರುಗಳ ಹೃದಯಕ್ಕೆ ವೇದ್ಯವಲ್ಲದೆ ಶಬ್ದ ಸಂಭ್ರಮದವರಿಗಿದು ದಕ್ಕದ ವಿಷಯ. ತಾನಿರ್ದಲ್ಲಿ ಎಂಬ ಸಂಜ್ಞೆ ಅರಿದು ನೋಡುವ ಭಾಗ್ಯ ಆ ಮಹಾಂತನಿಗೆ ಸಾಧ್ಯವು ಎಂದು ಹೇಳಿಹಳು.



# ಜ್ಞಾನಕ್ಕೆ ಶರಣು ಹೋಗು

**ದೇವ ನೊಳ್ಳಿದನೆಂದು ಮುಯ್ಯಾನ ಬೇಡ**
**ಕರಕಟ ಕಾಡುವನೊಳ್ಳಿಹನೆ ?**
**ಅಳಿಸುವ ನಗಿಸುವ ನೊಳ್ಳಿಹನೆ ?**
**ಬೆಚ್ಚದೆ ಬೆದರದೆ ತೊತ್ತು ತನವ ಮಾಡಲು ತನ್ನನೀವ ಶಂಭು ಜಕ್ಕೇಶ್ವರನು .**

**ತಾತ್ಪರ್ಯ:** 'ದೇವ' ನೊಳ್ಳಿದನೆಂದು ಮುಯ್ಯಾನ ಬೇಡ : ದೇವನಾರು ? ತೆರಹಿಲ್ಲದಭವ ನುಡಿಗೆಡೆಗೊಡದವನೆ ದೇವ. ದೇವನೊಳ್ಳಿದನೆಂದು ಮುಯ್ಯಾನ ಬೇಡ. ನುಡಿಗೆಡೆ ಗೊಡದವನು ಒಳ್ಳೆಯವನೆಂದು ಆಪೇಕ್ಷಿಸ ಬೇಡ, ಆಶ್ರಯಿಸ ಬೇಡ. ಧನ ಕನಕ ವನ್ನು ಫಲಪದಂಗಳನ್ನು ಸತಿ ಸುತರನ್ನು ಹೊಲಮನೆಯನ್ನು ಆಪೇಕ್ಷಿಸ ಬೇಡ. ನನ್ನ ಕಾಯ ಆಶ್ರ ಯದಾತನೆಂದು ಆಶ್ರಯಿಸಲು ಹೋಗಬೇಡ.

ದೇವನೊಳ್ಳಿದನೆಂದು ಭಕ್ತರು ಕಂಡರೆ? ಶರಣ ಶರಣೆಯರು ಕಂಡರೇ? ಮುಯ್ಯಾನಬೇ ಡವೆಂದು ಕಂಡರೇ? ದೇವನೊಳ್ಳಿದನೆಂದು ಫಲಪದಂಗಳ ಆಪೇಕ್ಷಿಸ ಬೇಡವೆಂದು ಎಚ್ಚರಿಸಿದರೆ? ದೇವ ಆಶ್ರಯದಾತನೆಂದು ಆಶ್ರಯಿಸ ಬೇಡವೆಂದು ಎಚ್ಚರಿಸಿಹರೆ ? ಫಲಪದಂಗಳ ಆಪೇಕ್ಷಿಸಿದಲ್ಲಿ ದೇವನು ಅವರನ್ನು ಸೇರನು, ಅಪ್ಪಿಕೊಳ್ಳನು. ಅವರನ್ನು ಅರಿಯನು, ಆಪೇಕ್ಷಿಸುವ ಭಕ್ತರು ಭಕ್ತರಾ ಗರೆಂದು ಅವರನ್ನು ಕಟುವಾಗಿ ಕಾಡುವನು. ಆಶ್ರಯಿಸುವ ಭಕ್ತರನ್ನು ಒಪ್ಪಿಕೊಳ್ಳನು. ಇವರನ್ನು ಅಳಿಸುವವನಾಗುವನು, ನಗಿಸುವವನಾಗುವನು ಇಂಥಹನಿಗೆ ಒಳ್ಳೆಯವನೆಂದು ಹೇಗೆ ಅನ್ನಬೇಕು.

ದೇವನು ಒಳ್ಳೆಯವನೆ? ನಗಿಸಿದರೂ ಒಳ್ಳೆಯವನು, ಅಳಿಸಿದರೂ ಒಳ್ಳೆಯವನು. ನಗಿಸು ವದಕ್ಕೂ ಅಳಿಸುವದಕ್ಕೂ ಅಳುಕದೆ ಬೆದರದೆ ಆತನ ಸೇವಕರ ಸೇವಕನಾದಡೆ ಕಿಂಕರರ ಕಿಂಕರ ನಾದಡೆ ತನ್ನ ತೆರಹಿಲ್ಲದಭವ ನುಡಿಗೆಡೆಗೊಡದ ಘನದಿರುವೆ ಭಕ್ತನದಾಗುವದು. ಭಕ್ತನಾದವನು ತನ್ನಂತರಂಗದಲ್ಲಿ ತನ್ನಿಂದ ತಾನೆ ಕಂಡುಕೊಳ್ಳುವನು. ಆಗ ಅವನಿಗಾದ ಪರಮಾನಂದ ಆವ ಭಾಷೆ ಯಲ್ಲಿ ಹೇಳಲು ದೊರೆಯವು.

ದೇವನೊಳ್ಳಿದನೆಂದು ಮುಯ್ಯಾನ ಬೇಡವೆಂದು ಭಕ್ತರು ಕಂಡುಕೊಂಡರು. ದೇವನು ನಿರ್ಮಾಯ, ನಿರಾಲಂಬ, ತೆರಹಿಲ್ಲದಭವ ನುಡಿಗೆಡೆಗೊಡದವನು ಆಗಿರುವಲ್ಲಿ ಅವನು ಸಕಾಮಿ ಭಕ್ತರನ್ನು ಒಪ್ಪಿಕೊಳ್ಳನು ನಿಷ್ಕಾಮಿಗಳನ್ನು ಒಪ್ಪಿಕೊಳ್ಳನು, ಅಪ್ಪಿಕೊಳ್ಳನು. ತ್ಯಾಗಿಗಳನ್ನು ಯೋಗಿಗಳನ್ನು ಅಪ್ಪಿಕೊಳ್ಳನು, ಭೋಗಿಗಳನ್ನು ಅಪ್ಪಿಕೊಳ್ಳನು. ಅಣಿಮಾದಿ ಸಿದ್ಧಿ ಪುರುಷರನ್ನು ಅಪ್ಪಿಕೊಳ್ಳನು. ನಾಹಂ ಎಂಬುವರನ್ನು ಸೇರನು, ಕೋಹಂ ಎಂಬುವರನ್ನು ಸೇರನು ಸೋಹಂ ಸೋಹಂ ಎಂಬುವರನ್ನು ಅಪ್ಪಿಕೊಳ್ಳನು. ಚಿದಹಮ್ಮು ಎಂಬುವರನ್ನು ಅಪ್ಪಿಕೊಳ್ಳನು ಏಕೆಂದರೆ ನುಡಿಗೆಡೆಗೊಡದ ಘನವ ನುಡಿಗೆ ತಂದುಕೊಂಡು ನುಡಿಸಿ ನೋಡಿಸಿದ ತೋರಿಸಿದ. ಆದರೂ ನುಡಿಗೆ ಒಪ್ಪಿದುದ ಕಂಡು ಅವರಿಂದ ದೂರವಾದನು. ನಿರಾಲಂಬ ದೇವನನ್ನು ಆವುದಾದರೂ ಅವಲಂಬನವುಳ್ಳವರಾಗಿ ನೋಡುವದರಿಂದ ವೈರಿಯಾಗಿ ಕಾಡುವನು ಎಂದು ಹೇಳಿಹಳು.

ದೇವನು ಆರಿಗೆ ಒಳ್ಳಿಹನು ? ದೇವನನ್ನು ಇದ್ದಕ್ಕಿದ್ದ ಹಾಗೆ ಅರಿತವರಿಗೆ ಒಳ್ಳೆಯವನು. ತನಗಿಂತ ಬೇರೆಂದು ತಿಳಿದು ತಿಳಿಯ ಹೋಗಬೇಡ. ತೆರಹಿಲ್ಲದಭವನಾಗಿಹ ದೇವನನ್ನು ಭಕ್ತನಾದವನು ತನ್ನ ತನು ನಷ್ಟ, ಮನನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನನಷ್ಟ, ಇವು ಐದು ನಷ್ಟ ಮಾಡುವದಲ್ಲದೆ ನಾನು ನೀನೆಂಬುದು ನಷ್ಟಮಾಡಿ, ಅರಿವ ಅರುಹಿಸಿಕೊಂಬುದ ನಷ್ಟ ಮಾಡಿದಾಗ, ಅರಿಯಲಿಲ್ಲದ ಅರುವೆ ನಿನ್ನದಾಗುವುದು. ದೇವನದು ಅರಿಯಲಿಲ್ಲದ ಅರುವೆ ಆಗುವದು. ಆಗ ತೆರಹಿಲ್ಲದಭವ ನುಡಿಗೆಡೆಗೊಡನು ಎಂಬುದು ಸಿದ್ಧವಾಗಿ, ನನ್ನಲ್ಲಿ ನಾ ನೀನೆಂಬುದಕ್ಕೂ ಸಂದಿಲ್ಲವಾಗಿ, ತೆರಹಿಲ್ಲದ ಮಹಾಘನದಿರುವೆ ತನ್ನದಾಗಿ, ದೇವನು ಒಳ್ಳಿದನೆಂಬುದು ಪರಿಚಯವಾಗುವದು. ಆಗ ದೇವನಲ್ಲಿ ಫಲ ಪದಂಗಳ ಆಪೇಕ್ಷಿಸುವದು ಅರುವಿನ ಲಕ್ಷಣವಲ್ಲವೆಂಬ ಸುಜ್ಞಾನ ಉದಯಿಸುವದು. ಆಗ ದೇವನು ತನ್ನ ಲೀಲೆಯಿಂದ ಕಟುವಾಗಿ ಕಾಡಿದರೂ ಅದು ಸ್ವಲೀಲೆಯೆಂದು ತಿಳಿವನು ಅಳಿಸಲಿ, ನಗಿಸಲಿ, ನನ್ನ ಹಿತವೆ ಎಂಬುದು ಗೊತ್ತಾಗುವದು. ಏಕೆಂದರೆ ಅಳಿಸಿದರೂ ಅದಕ್ಕೆ ತಾನು ಅಂಟದವನು, ನಗಿಸಿದರೂ ಅಂಟದವನು. ತನ್ನಿರವು ನಿರಾಲಂಬವಾದ್ದರಿಂದ ದೇವನು ನನ್ನ ಉತ್ಥಾನಕ್ಕಾಗಿ ತನ್ನ ಲೀಲೆಯಿಂದ ನಿಜವ ಮರೆಯದಂತಿಹನೊ ಇಲ್ಲವೊ ಎಂಬುದನ್ನು ದೇವನು ನೋಡುವನು ಅಲ್ಲವೆ? ಎಂದು ತನಗೆ ತಾನೆ ಎಚ್ಚರಗೊಳ್ಳುತ್ತಿಹನು.

ಪೂರ್ವದಲ್ಲಿ ನಗಿಸಿದರೆ ನಗುತ್ತಿದ್ದ. ಅದು ದೇವನ ಕರುಣೆ ಎನುತ್ತಿದ್ದ. ಅಳಿಸಿದರೆ ದುಃಖ ಕೊಟ್ಟರೆ ದೇವರ ಮುನಿಸು ಎನುತಿದ್ದ. ಈಗ ಪೂರ್ವ ಸ್ವಭಾವಕ್ಕೆ ವಿರುದ್ಧ ವರ್ತನವಾಗಿಹುದು. ದುಃಖ ಕೊಡಲಿ ಸಂತೋಷದಿಂದಿಡಲಿ ಬೇರಾಗಿನಿಂತು ನೋಡುವನು. ನಗಿಸಿದರೂ ಸಮಸ್ವರೂಪ, ಅಳಿಸಿದರೂ ಸಮಸ್ವರೂಪನಾಗಿಹನು. ಸಮತೆಯೆ ತನ್ನಿರುವಾಗಿ ತಾನೆ ಆಗಿ ವಿಷಮವ ಮೀರಿ ನಿಂತಿಹನು. ವಿಷಮ ದೃಷ್ಟಿಯ ಮೀರಿ ವಿಷಮವೆ ನಷ್ಟವಾಗಿ ನಿಸ್ಸೀಮನಾಗಿಹನು. ಆಗ ದೇವನೊಳ್ಳಿದನೆಂದು ಪೂರ್ಣ ಒಪ್ಪಿಕೊಂಡಿಹನು. ದೇವನು ಕೆಡಕು ಸ್ವಭಾವದವನಲ್ಲ, ತನ್ನಂತೆ ಮಾಡಿಕೊಳ್ಳಲು ಆತನು ಮಾಡುವ ಲೀಲೆ ಅಪಾರ, ಅವನು ಕಾಡುವದು ಏಕೆ ? ನಮ್ಮಗಳ ಉತ್ಥಾನಕ್ಕಾಗಿ. ಅಳಿಸುವದು ನಗಿಸುವದು ಏಕೆ? ನಮ್ಮಗಳ ವಿಷಮತ್ವ ನಷ್ಟಮಾಡುವ ಕಾರಣದಿಂದ. ನಿಜದೆಚ್ಚರ ಮಾಡುವ ಕಾರಣದಿಂದ. ಸಕಲ ಸಂಬಂಧ ಹುಸಿ ಎಂಬುದು ಸಿದ್ಧಿಸುವಗೋಸ್ಕರ. ಇದಲ್ಲದೆ ನಿಶ್ಚಿಂತ ಪದದಲ್ಲಿರಲು ಕರುಣಾಮಯನಾಗಿಹ ಕರುಣಾಕರನೆಂದು ತಿಳಿವನು. ಗುರುಲಿಂಗದ ಲೀಲೆ, ತನ್ನಂತೆ ಮಾಡುವ ಲೀಲೆ ಅವನ ಲೀಲೆಯಲ್ಲಿ ಕೆಡಕು ಎಂಬುದಿಲ್ಲ, ಅವನು ಇದ್ದಂತಿರುವ ಸ್ವಮಹಿಮನಿಗೆ ಏನೆನ್ನಬೇಕು? ಭಕ್ತನಿಗೆ ಗುರುಲಿಂಗ, ಜಂಗಮ ಲಿಂಗದ ಸ್ವಲೀಲೆಯ ಸಂತೃಪ್ತಿಗೆ ಏನನ್ನಾದರೂ ಮಾಡುವನು ; ಈ ಸ್ವಲೀಲೆ ನನ್ನ ಸ್ವರೂಪ ಸಿದ್ಧಿಗೋಸುಗ ಅಲ್ಲವೆ? ನಿನ್ನಯ ಅಭಿನಯವೆಂದು ತನ್ನ ಮನದಲ್ಲಿ ಅಷ್ಟಷ್ಟು ಹಿಗ್ಗುವನು. ಇಂತಪ್ಪ ಅನನ್ಯ ಭಕ್ತನಿಗೆ ದೇವನ ತೆರಹಿಲ್ಲದಭವನಿರುವು, ತನ್ನಿರುವು ಒಂದಾದಲ್ಲಿ ಆಗ ಹೃದಯದ ಕತ್ತಲೆ ಬೆಳಕಿನಷ್ಟು ತಿರುವು ಮುರುವು ಆಗುವದು. ಮರವೆಂಬ ಕತ್ತಲೆ ನಷ್ಟವಾಗಿ ಅರಿಯದರುವೆ ತನ್ನ ನಿಜದಿರುವಾಗಿರುವದರಿಂದ ಬೆಚ್ಚದೆ ಬೆದರದೆ ತೊತ್ತುತನವ ಮಾಡಲು ತನ್ನನ್ನೀವ ಶಂಭು ಜಕ್ಕೇಶ್ವರನು ಎಂದು ಹೇಳಿಹಳು.



---

1.ದೇಹವನ್ನು ಅಪ್ಪಿಕೊಂಡ ಜ್ಞಾನ

# ನಿತ್ಯ ತೃಪ್ತ ಎನ್ನಿಸಿಕೊಂಡ ಜ್ಞಾನಕ್ಕೆ ಹಸಿವೆಯುಂಟೆ ?

**ದೇವರ ದೇವ ನೀನೆಂದೆನಿಸಿಕೊಂಡೆ, ಬಾಣನ ಬಾಗಿಲ ಕಾಯ್ವರೇನಯ್ಯ;**
**ನಿತ್ಯ ತೃಪ್ತ ನೀನೆನಿಸಿಕೊಂಡೆ**
**ಚೆನ್ನನ ಮನೆಯಲುಂಬರೇನಯ್ಯ ? ಕರುಣಾಕರ ನೀನೆಂದೆನಿಸಿಕೊಂಡೆ ,**
**ಸಿರಿಯಾಳನ ಮಗನ ಬೇಡುವರೇನಯ್ಯ ? ನಿಮ್ಮ ಮಹಿಮವ ನೀವೆ ಬಲ್ಲಿರಿ ,**
**ಎನ್ನನುದ್ಧರಿಸಯ್ಯ ಶಂಭುಜಕ್ಕೇಶ್ವರ.**

**ತಾತ್ಪರ್ಯ : ದೇವರ ದೇವ ನೀನೆಂದೆನಿಸಿಕೊಂಡೆ :** ಓ ಜಂಗಮ ಲಿಂಗವೆ ! ದೇವರ ದೇವ ನೀನೆಂದೆನಿಸಿಕೊಂಡೆ ; *''ಆದಿ ಲಿಂಗ, ಅನಾದಿ ಶರಣ ನೀನೆಂದೆನಿಸಿ ಕೊಂಡೆ. ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗವನುಪ ಮೆಗೆ ತಂದು ಎರಡೆನ್ನಬಹುದೆ ? ಶುದ್ಧ ಶಿವೈಕ್ಯ ಕೂಡಲಚೆನ್ನಸಂಗಾ''*

'' ಶುದ್ಧ ಶಿವೈಕ್ಯನೆ, ದೇವರ ದೇವ ನೀನೆಂದೆನಿಸಿಕೊಂಡೆ. ನಿರಾವರಣ, ನಿರ್ಜನಿತ ನಿರ್ಲೇಪ, ನಿಃಕಪಟ ನಿರ್ವಚನೀಯನುಪಮಿಸಲಿಲ್ಲ ನಿಲ್ಲೊ, ನಿರಾಳ ನಿರ್ಮಾಯ ನಿಸ್ಸಂಗಿಯೆ ನಿರ್ಲಿಖಿತ ನಿರವಯನ ಅವಯವಕ್ಕೆ ತರಲಿಲ್ಲ ನಿಲ್ಲೋ. ಸಿಮ್ಮಲಿಗೆಯ ಚೆನ್ನರಾಮನೆಂಬ ಜಂಗಮ ಲಿಂಗವನುಪಮಿಸಲಿಲ್ಲ ನಿಲ್ಲೊ! '' ದೇವರ ದೇವ ನೀನೆಸಿಕೊಂಡೆ. ಓ ದೇವರ ದೇವಯ್ಯ ನಿಮ್ಮ ಮಹಾ ಘನವನಾರು ಬಲ್ಲರು? ''ನಿಮ್ಮ ಮಹಿಮೆಯ ನೀವೆ ಬಲ್ಲಿರಿ, ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದಿರಯ್ಯ ಒಂದನಂತಕಾಲ. ಮಹವು ಮಹದಾನಂದದಲಕ್ಕಾಡಿ ಮತ್ತಲ್ಲಿಯೆ ಲೀಯವಾಗಿರ್ದುದು ಒಂದು ಕೋಟಿ ವರ್ಷ ಕೂಡಲ ಚೆನ್ನಸಂಗಮದೇವಾ ವಿಪರೀತ ಚಾರಿತ್ರ''

ದೇವರ ದೇವಯ್ಯ ಅದಾರಯ್ಯ ನಿನ್ನ ವರ್ಣಿಸುವದು? ಮಹಾಕಾಲದಲ್ಲಿ ನಿಮ್ಮಿಂದ ನೀವೆ ಆಗಿರ್ದ ಸ್ವಯಂಭುವೆ ! ದೇವರ ದೇವ ಆ ಮಹಾಘನವೆ ತನ್ನ ಮಹದಾನಂದದಲಕ್ಕಾಡಲು ಬಂದು ಮತ್ತಲ್ಲಿಯೆ ಲೀಯವಾಗಿರ್ದ ಘನಕ್ಕೆ ಘನವೆ ! ನಿರಾವರಣ ಜಂಗಮ ನಿರ್ಜನಿತ ಜಂಗಮ ದೇವರ ದೇವನೆನಿಸಿಕೊಂಡೆ ಜಂಗಮ ಲಿಂಗವೆನಿಸಿಕೊಂಡೆ ! ಅರಿಯಲಿಲ್ಲದ ಅರುವೆ ನಿನ್ನಿ ರುವಾಗಿ ನಿರ್ಮಾಯ ಲಿಂಗವೆಂದೆನಿಸಿಕೊಂಡರೂ ಬಾಣನ ಬಾಗಿಲ ಕಾಯುವರೇನಯ್ಯ? ಏನಿದು ನಿನ್ನಯ ಲೀಲೆ ! ತೋರಬಾರದ ಘನವಾಗಿ ತೋರುವನಾದೆಯಾ ! ತೋರಿದರೆ ತೋರಯ್ಯ ಬಾಣನ ಬಾಗಿಲ ಕಾಯುವವನಾಗಿ ತೋರುವದೇನಯ್ಯ? ನೀನು ನಿರ್ಜನಿತನೆನಿಸಿಕೊಂಡೆ; ನಿರ್ಜ ನಿತನೆನಿಸಿಕೊಂಡರೂ ಗಮನಿ ಜಂಗಮವಾಗಿ ಬಾಣನ ಬಾಗಿಲ ಕಾಯುವ ನಿನ್ನ ಅಭಿನಯ ಅದಾ ರಯ್ಯ ಬಲ್ಲವರು ? ಬಾಣನು ಅರು ಹೃದಯವುಳ್ಳವನೆಂದು ಬಾಗಿಲ ಕಾಯುವದೇನಯ್ಯ? ಅರು ವಿಂಗರುವಾಗಿಹ ಅರಿಯಲಿಲ್ಲದ ಅರುವೆ ನಿನ್ನ ಇರುವು. ನಿನ್ನಯ ಮಹಾದಿರುವಿಂಗೆ ಬಾಣನ ಭಕ್ತಿ ಕಂಡಿತ್ತೆ ? ಭಾವ ಕಂಡಿತ್ತೆ ! ಅನುಭಾವ ಕಂಡಿತ್ತೆ! ಅಯ್ಯ ನಿಮ್ಮ ಮಹಿಮೆ ನೀವೆ ಬಲ್ಲಿರಿ. ನಿನ್ನ ನಿರ್ಜನಿತವಾಗಿಹ ಮಹದಾನಂದದಲಕ್ಕಾಡಲು ಬಾಣನ ಬಾಗಿಲ ಕಾಯ್ದೆಯಾ? ನಿರ್ಮಾಯದ ಮಹಾದಾನಂದದಲಕ್ಕಾಡಲು ಬಾಣನ ಮನೆಯ ಬಾಗಿಲ ಕಾಯ್ದೆಯಾ?

**ನಿತ್ಯ ತೃಪ್ತ ನೀನೆಸಿಕೊಂಡೆ ಚೆನ್ನನ ಮನೆಯಲುಂಬರೇನಯ್ಯಾ :** ಓ ಸ್ವಯಂಭು

ದೇವನೆ? ಏನೆಂದೆನ್ನದ ಮುನ್ನ ತಾನೆ ಆದವನೆ. ನೀನಾವ ಕಾರಣದಿಂದ ಚೆನ್ನನ ಮನೆಯಲುಂಡೆ? ನಮ್ಮಗಳ ದೃಷ್ಟಿಗೆ ಬಹು ಅಚ್ಚರಿಯಾಗಿದೆಯಲ್ಲಾ ! ನೀನೆತ್ತ ಚೆನ್ನನು ಎತ್ತ? ಚೆನ್ನನ ಮನೆ ಎತ್ತ? ನಿತ್ಯ ತೃಪ್ತನಾದ ನೀನೆತ್ತ? ಚೆನ್ನನ ಮನೆಯ ಊಟವೆತ್ತ ? ಓಹೋ ! ಕಾಣದುದ ಕಂಡಿತೆ ! ನಿತ್ಯ ತೃಪ್ತ ಉಣ ಕಲಿತನೆ? ಹಸಿವು ಕಾಣದವನು ಹಸಿವು ಕಂಡನೆ? ಉಣ್ಣದವನು ಉಂಡಂತೆ ಕಂಡನೆ ? ನೀರು ನೀರಡಿಸಿತೆ ? ನೀರು ನೀರು ಕುಡಿದ ಮೇಲೆ ಇನ್ನಾರಿಗೆ ಹೇಳುವದು? ನಿಮ್ಮ ಮಹಿ ಮೆಯ ನೀವೆ ಬಲ್ಲಿರಿ.

ಓ ಮಹಾ ಮಹಿಮನೆ! ಚೆನ್ನನ ಮನೆಯಲುಂಡು ಚೆನ್ನಂಗೆ ಉಂಡು ಉಪವಾಸವಿದ್ದುದು ತೋರಿದೆಯಾ ? ನಿರವಯನಾಗಿ ಅವಯವವುಳ್ಳವನಾಗಿ ಕಂಡೆಯಾ? ಏನಿದು ನಿನ್ನಯ ವಿಪರೀತ ಚಾರಿತ್ರ! ಎಲ್ಲರು ಉಂಡವನಂತೆ ನೀನು ಉಂಡವನಲ್ಲ, ನೀನು ಉಂಡುದು ಬೇರೆ. ಪರತತ್ವದ ಪರಿಣಾಮಿ. ನೀನೆಂತು ಉಂಡೆ ನಾನೆಂತು ಕಂಡೆ? ಉಂಡುದು ಅಗ್ನಿಯೆಂದೆ ಉಟ್ಟುದು ಪೃಥ್ವಿ ಯೆಂಬ ತತ್ವ ಶಿಖಾಮಣಿ. ನೀನುಂಡುದು ಬೇರೆ. ಓ ನನ್ನಯ್ಯ ಚೆನ್ನಯ್ಯನ ಮನವನುಂಡೆಯಾ? ಮನವನುಂಡು ತೆರಹಿಲ್ಲದ ಲಿಂಗಭರಿತವೆಂಬ ಘನಮನ ಮಾಡಿದೆಯಾ? ತನುವನುಂಡು ತನು ವಿನ ತನು ಮಹಾಘನದ ತನುವೆಂದು ತೋರಿದೆಯಾ? ಧನವನುಂಡು ನಿರ್ವಾಣ ಧನವ ಮಾಡಿ ದೆಯಾ? ಓ ಮಹಾಲಿಂಗವೆ? ನಿಮ್ಮ ಮಹಿಮೆಯ ನೀವೆ ಬಲ್ಲಿರಿ.

**ಕರುಣಾಕರ ನೀನೆಂದೆನಿಸಿಕೊಂಡೆ ಸಿರಿಯಾಳನ ಮಗನ ಬೇಡುವರೇನಯ್ಯಾ:** ಓ ದೇವರ ದೇವಯ್ಯನೆ! ನಿನ್ನ ಕರುಣೆ ಅದಾರು ಬಲ್ಲರು? ಕರುಣಾಕರ ನೀನೆಂದಿನಿಸಿದ ರಹಸ್ಯ ತಿಳಿಸಲು ಸಿರಿ ಯಾಳನ ಮಗನ ಬೇಡಿದೆಯಾ? ಓ ಸಿರಿಯಾಳ ! ಈ [1] ಹುಸಿ ಮಗು [1] ನಿನಗೆ ಬೇಡ, ಆ ಕೂಸು ನನಗೆ ಕೊಡು. [2] ದಿಟ ಮಗು [2] ನೀನು ಕೊಳ್ಳು. ಎಂದು ದಿಟ ಮಗುವ ಕರುಣಿಸಲು ಸಟೆಯ ಮಗು ಬೇಡಿದೆಯಾ? ಇದು ನಿತ್ಯ ಇದು ಅನಿತ್ಯ ಇದು ರೂಪ, ಇದು ನಿರೂಪ, ಇದು ಲಿಂಗ , ಇದು ಅಂಗವೆಂಬ ವಿಭಾಗ ದೃಷ್ಟಿಯ ವಿಚಾರವೆಂಬ ಕೂಸನ್ನು ಕೇಳಿದೆಯಾ? ಪುರುಷಾರ್ಥ ಜ್ಞಾನವೆಂಬ ಮಗುವನ್ನು ಬೇಡಿದೆಯಾ ? ನಿಮ್ಮ ಘನವ ನೀವೆ ಬಲ್ಲಿರಿ ; ಈ ಪುರುಷಾರ್ಥ ಜ್ಞಾನವೆಂಬ ಮಗುವಿರುವವರೆಗೂ ಸಿರಿಯಾಳ ಸಿರಿಯಾಳನಾಗಿ ಉಳಿಯುವನು. ತಂದೆ ತಂದೆ ಯಾಗಿ ಉಳಿವನು. ಇತ್ತ ತನ್ನ ತಾ ತಿಳಿಯನು. ನನ್ನನ್ನು ತಿಳಿಯನು. ಮಗುವನ್ನು ತಿಳಿಯನು. ಮಗನ ಬೇಡದಿದ್ದರೆ ಸಿರಿಯಾಳನು ಅರಿಯ ಬಾರದ ಘನನಾಗಿಹ ತನ್ನಿರುವ ತಿಳಿಯಲಾರ. ಅರಿ ಯಲಿಲ್ಲದ ಅರುವ ತಿಳಿಯಲಾರನೆಂದು ಶಿರಿಯಾಳನ ಮಗನ ಬೇಡಿದೆಯಾ? ಕರುಣಾಕರ ನಿನ್ನ ಕರುಣೆಯ ಮಹದಿರುವ ನೀವೆ ಬಲ್ಲಿರಿ ಎಂದು ಹೇಳಿಹಳು.

**ನಿಮ್ಮ ಮಹಿಮವ ನೀವೆ ಬಲ್ಲಿರಿ, ಎನ್ನ ನುದ್ಧರಿಸಯ್ಯ ಶಂಭುಜಕ್ಕೇಶ್ವರ:** ದೇವರ ದೇವನೆಂದೆನಿಸಿದ ನಿನ್ನ ನಿಜದಿರುವ ಕರುಣಿಸಿ ಎನ್ನನುದ್ಧರಿಸು. ನಿತ್ಯ ತೃಪ್ತನೆನಿಸಿಕೊಂಡ ಊಟಕಿಕ್ಕದ ಗುರುಲಿಂಗವು ಎನ್ನೊಳುದಯಿಸಿ ಎನ್ನನುದ್ಧರಿಸಯ್ಯ. ಕರುಣಾಕರನೆಂದೆನಿಸಿದ ಮಹಾಘನ ನಿಮ್ಮ ಘನವ ನೀವೆ ಬಲ್ಲಿರಾಗಿ ನೀವು ಮಹದಾನಂದದಲಕ್ಕಾಡಲು ಬಂದ ನಿನ್ನ ಮಹದಾಟವ ಕರುಣಿಸಿ ಎನ್ನನುದ್ಧರಿಸಯ್ಯಾ ಶಂಭುಜಕ್ಕೇಶ್ವರ ಎಂದು ಹೇಳಿಹಳು.

□

# ಜ್ಞಾನ ದೇವನೇ ದೇವನು

**ದೇವರೆಂದು ಅರ್ಚಿಸಿ, ಪೂಜಿಸಿ, ಭಾವಿಸಿ,**
**ಮತ್ತೆ ತ್ರಿವಿಧವ ಮುಟ್ಟಿದರೇನು**
**ಕಷ್ಟ ಗುಣವ ನುಡಿವ ಭಕ್ತ ಹೀನರ ಕಂಡಡೆ**
**ಅವರನೊಚ್ಚುತ ತೊಲಗಬೇಕು ಶಂಭುಜಕ್ಕೇಶ್ವರ**

**ತಾತ್ಪರ್ಯ:** ದೇವರೆಂದು ಅರ್ಚಿಸಿ, ಪೂಜಿಸಿ, ಭಾವಿಸಿದವರು ಶರಣ ಶರಣೆಯರು. ಮುಮುಕ್ಷುಗಳು ಜಿಜ್ಞಾಸುಗಳು. ಗುರು ಭಕ್ತರು, ಲಿಂಗಭಕ್ತರು, ಜಂಗಮಭಕ್ತರು. ಇವರು ಗುರು ಲಿಂಗ ಜಂಗಮಕ್ಕೆ ದೇವನೆಂದು ಅರ್ಚಿಸಿದವರು, ಪೂಜಿಸಿದವರು ಭಾವಿಸಿದವರು. ಭಕ್ತರಲ್ಲಿ ಶರಣರಲ್ಲಿ ಅಗ್ರಗಣ್ಯನಾದ ಬಸವಯ್ಯನೆ, ''ಅರ್ಥವನರ್ಥವ ಮಾಡಿ ಕೋಳಾಹಳಂಗೈಯುತ್ತಿರಲಿ. ಹುಟ್ಟಿದ ಮಕ್ಕಳ ನವಖಂಡ ಮಾಡಿ ಕಡಿಯುತ್ತಿರಲಿ, ಮುಟ್ಟಿದ ಸ್ತ್ರೀಯ ಕಣ್ಣ ಮುಂದೆ ಅಭಿಮಾನಗೊಂಡು ನೆರೆಯುತ್ತಿರಲಿ, ಇಂತಿ ವೆಲ್ಲವೂ ಹೊರಗಣವು. ಇನ್ನೆನ್ನ ಅಂಗದ ಮೇಲೆ ಬರಲಿ. ಇಕ್ಕುವ ಶೂಲವ ಪ್ರಾಪ್ತವಾಗಲಿ. ಹಿಡಿ ಖಂಡವ ಮಾಡಿ ಕಡಿಯುತ್ತಿರಲಿ, ಮತ್ತೆಯೂ ಲಿಂಗಾರಾಧನೆ ಮಾಡುವೆ, ಜಂಗಮಾರಾಧನೆ ಮಾಡುವೆ, ಪ್ರಸಾದಕ್ಕೆ ತಪ್ಪೆ. ಇಂತಪ್ಪ ಭಾಷೆ ಕಿಂಚಿತ್ತೂ ಹುಸಿಯಾದೊಡೆ ನೀನಂದೇ ಮೂಗ ಕೊಯ್ಯು ಕೂಡಲ ಸಂಗಮ ದೇವ''. ಇದು ಬಸವೇಶನ ಅಭಿಮತವಾಗಿರುವುದು. ಇದಲ್ಲದೆ ಇನ್ನೊಬ್ಬ ಶರಣರು: ''ಒಲಿದು ಒಲಿಸಿಕೊಳ್ಳಬೇಕು. ಒಲಿದಲ್ಲದೆ ಇಲ್ಲ, ಹಲವು ಕೊಂಬೆ ಕೊಂಬೆಗೆ ಹಾರದಿರು ಮರುಳೆ; ಅಟ್ಟಿ ನೋಡುವ, ಮುಟ್ಟಿ ನೊಡುವ, ತಟ್ಟಿ ನೋಡುವ, ಒತ್ತಿ ನೋಡುವ, ಅಟ್ಟಿದಡೆ, ಮುಟ್ಟಿದಡೆ, ತಟ್ಟಿದಡೆ, ಒತ್ತಿದಡೆ ನಿಷ್ಠೆ ಬಿಡದಿರ್ದಡೆ, ತನ್ನನ್ನೀವ ಮಹಾಲಿಂಗ ಕಲ್ಲೇಶ್ವರ'' ಇದಲ್ಲದೆ ಸತ್ಯಕ್ಕ ತಾಯಿಯು ''ದೇವನೊಳ್ಳಿದನೆಂದು ಮುಯ್ಯಾನಬೇಡ. ಕರಕಟವಾಗಿ ಕಾಡುವನೊಳ್ಳಿದನೆ? ಅಳಿಸುವ, ನಗಿಸುವನೊಳ್ಳಿದನೆ? ಬೆಚ್ಚದೆ, ಬೆದರದೆ, ತೊತ್ತುತನವ ಮಾಡಲು ತನ್ನನ್ನೀವ ಶಂಭುಜಕ್ಕೇಶ್ವರನು''.

ಮತ್ತಂ ''ತನುವನೊಪ್ಪಿಸಿದನಯ್ಯ ಭಕ್ತನು. ತನ್ನ ಮನವನೊಪ್ಪಿಸಿದನಯ್ಯ ಭಕ್ತನು. ತನ್ನ ಧನವನ್ನೊಪ್ಪಿಸಿದನಯ್ಯ ಭಕ್ತನು. ತನ್ನ ಅಂತರಂಗದ ಆತ್ಮ ಸುಖಕ್ಕೆ ಈ ತ್ರಿವಿಧವನು ಹೇಳಿದಂತುಂಟು. ಬಿಟ್ಟ ವ್ರತಗೇಡಿಯ ತೋರದಿರು ಕೂಡಲ ಚನ್ನ ಸಂಗಮದೇವ''.

ದೇವರೆಂದು ಅರ್ಚಿಸಿ, ಪೂಜಿಸಿ ಭಾವಿಸಿಹರು, ದೇವನೆಂದರೆ ಗುರು ದೇವನೇ ದೇವನು. ಲಿಂಗ ದೇವನೇ ದೇವನು. ಜಂಗಮ ದೇವನೇ ದೇವನೆಂದು ಪೂಜಿಸಿ, ಭಾವಿಸಿ, ಮತ್ತೆ ತ್ರಿವಿಧವ ಮುಟ್ಟಿದೆನೆಂದು ಕಷ್ಟ ಗುಣವ ನುಡಿವ ಭಕ್ತಿ ಹೀನ ಭಕ್ತರುಗಳು ತ್ರಿವಿಧವ ಮುಟ್ಟಿದುದು ಏಕೆ? ಮಾಂಸ ಪಿಂಡವ ಕೆಡಿಸಿ ಮಂತ್ರ ಪಿಂಡವ ಮಾಡಿದ. ಅಂಗದ ಮೇಲೆ ಲಿಂಗ ಸಾಹಿತ್ಯವ ಮಾಡಿ ಅಂಗವೇ ಲಿಂಗವ ಮಾಡಿ ತೋರಿದ. ಮನದ ಮೇಲೆ ಲಿಂಗ ಸಾಹಿತ್ಯವ ಮಾಡಿ ಮನವೇ ಲಿಂಗ ಮಾಡಿ ತೋರಿದ. ಪ್ರಾಣದ ಮೇಲೆ ಲಿಂಗ ಸಾಹಿತ್ಯವ ಮಾಡಿ ಪ್ರಾಣ ಲಿಂಗವ ಮಾಡಿ ತೋರಿದ. ಪೂರ್ವಾಶ್ರಯದ ಭಾವ ಕೆಡಿಸಿ ಭಾವ ಭರಿತ ಮಾಡಿ ತೋರಿದ. ಭಾವ ಭಾವಿಸಲುಂಟೇ? ಭಾವ ಭಾವಿಸಲರಿಯದು? ಅದೇನು ಕಾರಣ ಭಾವದಲ್ಲಿ ಭರಿತನಾಗಿ. ಇಂತಪ್ಪ ಅಪೂರ್ವಿಕದಿರುವ ತೋರಿಸುವನೆಂದು ಗುರು ಜಂಗಮ ದೇವರೆಂದು

ಅರ್ಚಿಸಿ, ಪೂಜಿಸಿ, ಭಾವಿಸಿದರೆಂದು ತನುವಿನ ತನುವ ಮಾಡಲು ಮುಟ್ಟಿದಡೇನು, ಮನದ ಮನವ ಮಾಡಲು ಮುಟ್ಟಿದಡೇನು ? ಜೀವದ ಜೀವ ಮಾಡಲು ಮುಟ್ಟಿದಡೇನು ? ತೆರಹಿಲ್ಲದ ಲಿಂಗ ಭರಿತನ ಮಾಡಿದಲ್ಲಿ ಗುರುವಿಂಗೆ ತನು ಉಂಟೆ ? ತನಗೂ ತನು ಉಂಟೆ ? ಪಿಂಡವೆ ಮಂತ್ರ ಪಿಂಡವಾದಲ್ಲಿ ಗುರು ಲಿಂಗ ಮುಟ್ಟಿದುದು.

''ಗುರುವ ನರಿಯಲು ಅಷ್ಟಾದಶ ವಿದ್ಯವ ನರಿಯಲುಂಟು, ಓದಲುಂಟು, ಕೇಳಲುಂಟು, ಹೇಳಲುಂಟು, ಗುರು ಕರುಣೆಯಿಂದ ಗುರುವನರಿದ ಬಳಿಕ ಗುರುವಲ್ಲದೆ ತಾನಿಲ್ಲ. ತಾನಿಲ್ಲಾಗಿ ಓದಲಿಲ್ಲ, ಓದಲಿಲ್ಲಾಗಿ ಕೇಳಲಿಲ್ಲ, ಕೇಳಲಿಲ್ಲಾಗಿ ಹೇಳಲಿಲ್ಲ, ಹೇಳಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲದ ಅರುವ ನರುಹಿಸಿದ ಗುರುವ ನರಿಯಲುಂಟೆ ? ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ. ''

ಗುರುದೇವನೆಂದರೆ ಅರಿಯಲ್ಲಿಲ್ಲದ ಅರುವ ನರುಹಿಸಿದ ನಿರುಪಮನ ಉಪಮೆಗೆ ತರಬಾರದು. ಅರಿವ ಅರುಹಿಸಿಕೊಂಬ ಈ ಉಭಯಂಗಳ ಅರಿಯದಂತಿದ್ದುದರಿಂದ ದೇಹಿಗೆ ದೇಹಿಯಾಗಿಹ ರಹಸ್ಯವರಿತುದರಿಂದ ಏನೆಂದೆನ್ನದ ಮುನ್ನ ತಾನಾದವನು. *'' ಎಲ್ಲರು ಓದುವದು ವಚನಂಗಳು , ಎಲ್ಲರು ನುಡಿವರು ಬೊಮ್ಮವ, ಎಲ್ಲರು ಹೇಳುವರು ವಚನಂಗಳು. ಹೇಳುವಾತ ಗುರುವಲ್ಲ, ಕೇಳುವಾತ ಶಿಷ್ಯನಲ್ಲ, ಹೇಳಿಹೆ ಕೇಳಿಹೆನೆಂಬನ್ನಕ್ಕರ ವಿರಕ್ತಸ್ಥಲಕ್ಕೆ ಭಂಗನೋಡಾ ಅಮುಗೇಶ್ವರಾ. ''*

ಅರಿಯಲಿಲ್ಲದ ಅರುವ ನರುಹಿಸಿದ ಬಳಿಕ ತಾನು ಅರುಹಿಸಿಕೊಳ್ಳುವವನಾಗಲಿಲ್ಲ. ಅರಿವವನೂ ಆಗಲಿಲ್ಲ, ಅರಿಯಲಿಲ್ಲದ ಅರುವೆ ತಾನಾದ. ಅರಿಯಲಿಲ್ಲದ ಅರುವು ಅದು ತೆರಹಿಲ್ಲದಭವನು ಅರುಹಿಸಿಕೊಂಬುದಕ್ಕೂ ಅವಕಾಶ ಕೊಡದವನು. ಅರಿವುದಕ್ಕೂ ಅವಕಾಶ ಕೊಡದವನು. ಅರಿಯಲಿಲ್ಲದ ಅರುವೆ ಗುರುವಿನ ಇರುವು, ಶಿಷ್ಯನ ಇರುವು ಒಂದಾದುದರಿಂದ ತಾನೆ ತನ್ನ ವಿನೋದಕ್ಕೆ ಗುರುವಾದ. ತನ್ನ ವಿನೋದಕ್ಕೆ ಶಿಷ್ಯನಾದ ; ಓದಲಿಲ್ಲ. ಗುರು ಶಿಷ್ಯರ ಇರುವು ಒಂದಾದುದರಿಂದ ಗುರುವು ಓದಲಿಲ್ಲ. ಶಿಷ್ಯನು ಓದಲಿಲ್ಲ. ಓದಲಿಲ್ಲಾಗಿ ಗುರು ಶಿಷ್ಯರು ಓದದವರು, ಕೇಳದವರು, ಹೇಳದವರು. ಅರಿಯಲಿಲ್ಲದ ಅರುವೆ ತಾವಾದವರು. ಸಮ ಪ್ರಕಾಶವಾದ ತತ್ವ ತಿಳಿದವರು. ಇಂತಪ್ಪ ಪರತತ್ವ ತಿಳಿಯಲು ವಚನಂಗಳ ಓದುವುದು, ನುಡಿಯುವುದು ಬೊಮ್ಮವ ; ಹೇಳುವುದು ವಚನಮಗಳು. ಸಮಪ್ರಕಾಶವಾದ ಜ್ಯೋತಿ ತಾನಾಗಿರುವಲ್ಲಿ ಹೇಳುವ ಗುರುವಿಲ್ಲ, ಕೇಳುವ ಶಿಷ್ಯನಿಲ್ಲ, ಇನ್ನು ಹೇಳುವುದು, ಕೇಳುವುದೆ ತಾವಾಗಿರುವರೆಂದಲ್ಲಿ ಅರಿಯಲಿಲ್ಲದ ಅರಿವು ತಾವು ಆಗದ್ದರಿಂದ ವಿರಕ್ತ ಸ್ಥಲಕ್ಕೆ ಭಂಗವೆಂದು ಹೇಳಿಹರು.

'' ಅರಿಯಲಿಲ್ಲದ ಅರುವ ತಿಳಿಸಲು ; ಗುರುಘನ ಅರಿವ ಅರುಹಿಸಿಕೊಂಬ ಭಾವ ಅಟ್ಟಿದ, ತಟ್ಟಿದ, ಮುಟ್ಟಿದ, ಒತ್ತಿದ. ಅರುಹಿಸಿಕೊಂಬ ದೃಶ್ಯವ, ಅರಿವ ದೃಕ್ ಎಂಬ ಭಾವ ಅಟ್ಟಿದಡೆ, ತಟ್ಟಿದಡೆ ಮುಟ್ಟಿದಡೆ ನಿಷ್ಠೆ ಬಿಡದಿರ್ದಡೆ ತನ್ನನ್ನೀವ ಮಹಾಲಿಂಗ ಕಲ್ಲೇಶ್ವರ '' ಮಹಾಂತರ ಮಹದಿರುವುಳ್ಳ ಅರಿವ ಅರಿಯುವ ಆತುರವಿರದ್ದರಿಂದ ಲೋಕದ ಪ್ರತಿಷ್ಠೆಗಾಗಿ ಆತ್ಮ ಪ್ರತಿಷ್ಠೆಗಾಗಿ ಶಬ್ದ ಸಂಭ್ರಮವ ಗಳಿಸಿಕೊಳ್ಳಬಂದಲ್ಲಿ ಗುರುದೇವನ ಪರೀಕ್ಷೆಯಲ್ಲಿ ಅವರು ವಿರೋಧವ ತಿಳಿದು ದೇಹಭಾವಕ್ಕಿಳಿಯುತ್ತಾರೆ. ದೇಹಾಭಿಮಾನಿಗಳಾಗಿ ಕಷ್ಟ ಗುಣವ ನುಡಿವ ಭಕ್ತಿಹೀನರ ಕಂಡಡೆ ಅವರಿಂದ ದೂರ ತೊಲಗಬೇಕು ಎಂದು ಹೇಳಿಹರು.



# ದೇಹ ಜ್ಞಾನದ ಲಾಂಛನ

**ನಡೆದವರುಂಟೆ ಕೈಲಾಸಕ್ಕೆ ದಾಳಿಯ? ನುಡಿದವರುಂಟೆ ಶಿವಲಾಂಛನಕ್ಕೆ ವೇಳೆಯ?**
**ಕುಡಿದವರುಂಟೆ ಕಾಳಕೂಟ ವಿಷವ ಅಮೃತವ ಮಾಡಿ? ಮಡದಿಯ ಜಂಗಮಕ್ಕೆ**
**ಕೊಟ್ಟು ನೋಡಿದವರುಂಟೆ ?**
**ಹಡೆದ ಮಕ್ಕಳ ಕೊಂದು ಜಂಗಮಕ್ಕೆ ಉಣಲಿಕ್ಕಿದವರುಂಟೆ ?**
**ನೀವು ಕೊಡುವದು ಕೌತುಕವಲ್ಲ ಶಂಭುಜಕ್ಕೇಶ್ವರ, ಎನ್ನೊಡೆಯನ**
**ಸಾತ್ವಿಕ ಸದ್ಭಕ್ತಿ ಮಹಿಮೆಗೆ ನಮೊ ನಮೊ ಎಂಬೆನು.**

**ತಾತ್ಪರ್ಯ : ನಡೆದವರುಂಟೆ ಕೈಲಾಸಕ್ಕೆ ದಾಳಿಯ ? :**
ನಡೆದವರುಂಟು, ಶೈವ ಭಕ್ತನಾದ ಶಿವ ಜಲಂಧರನು ಶಿವೋಪಾಸನವ ಮಾಡಿ ಶಿವನಿಂದ ವರ ಪಡೆದು ಕೈಲಾಸಕ್ಕೆ ದಾಳಿಯ ಮಾಡಿದನೆಂದು ಪುರಾಣಗಳಿಂದ ತಿಳಿದುಬರುತ್ತದೆ . ಅವನು ಶಿವನ ವೇಷ ಹಾಕಿಕೊಂಡು ಪಾರ್ವತಿಯ ಪತಿವ್ರತ ಕೆಟ್ಟರೆ ತಾನೆ ಕೈಲಾಸದ ಅಧಿಪತಿಯಾಗುವೆನೆಂಬ ಭ್ರಮದಿಂದ ದಾಳಿಮಾಡಿ ಅದು ಅಸಾಧ್ಯವಾದುದರಿಂದ ಶಿವ ಜಲಂಧರ ಶಿವನಿಂದ ಹತನಾದನು.

**ನುಡಿದವರುಂಟೆ ಶಿವಲಾಂಛನಕ್ಕೆ ವೇಳೆಯ ? :** ಶಿವನ ವೇಷವ ಧರಿಸಲು ಲಾಂಛನವ ಹಾಕಲು ಅದಕ್ಕೆ ಸಮಯವೇಕೆ ಮುಹೂರ್ತವೇಕೆ ? ತ್ಯಾಗ ನಿರಾಶೆ ಜ್ಞಾನ ಮನವ ಅವಲಂಬಿತ ವಾದುದು. ಸಿದ್ಧಾರೂಢರಿಗೆ ಶಿವಲಾಂಛನ ಹಾಕಲು ಸಮಯ ಅದಾರು ಹೇಳಿದರು. ಶುಖಮುನಿಗೆ ತ್ಯಾಗ ಮಾಡಲು ಸಮಯ ಅದಾರು ಹೇಳಿದರು. ಈಗಿನ ಸಮಯದಲ್ಲಿ ಇದಕ್ಕೆ ವಿರುದ್ಧವಾಗಿ ನಡೆದ ಬಳಗಾನೂರ ಮರಿಸ್ವಾಮಿಗೆ ತ್ಯಾಗಮಾಡಲು ಅದಾರು ಸಮಯ ಹೇಳಿದರು. ತನ್ನಿಂದ ತನಗೆ ಜ್ಞಾನ ಉದಯವಾಗುವದಕ್ಕೆ ಸಮಯವೇಕೆ ?

ಎಷ್ಟೊ ಆಶ್ರಮವಾಸಿಗಳು ತಾವು ಸನ್ಯಾಸ ಸ್ವೀಕಾರ ಮಾಡಲು ಒಳ್ಳೇ ಜ್ಯೋತಿಷ್ಯಗಾರನನ್ನು ಕೇಳಿ ಶಿವಲಾಂಛನವ ಹಾಕಲು ಸನ್ಯಾಸಿಗಳಿಂದ ಮಂತ್ರ ವೇದಘೋಷದೊಂದಿಗೆ ಲಕ್ಷೋಪ ಲಕ್ಷ ಹಣ ಖರ್ಚುಮಾಡಿ ಪೀಠಾಧಿಕಾರಿಗಳ ಬರಮಾಡಿಕೊಂಡು ಅವರ ಆಜ್ಞೆಯ ಪಡೆದು ' ಶಿವಲಾಂಛನ ' ವ ಹಾಕಿಕೊಳ್ಳುವರು. ಈ ಸಾಂಪ್ರದಾಯ ಬ್ರಾಹ್ಮಣರಲ್ಲಿ ಜಂಗಮಯ್ಯಗಳಲ್ಲಿ ಉಪನಯನ ಸಂಸ್ಕಾರ, ಅಯ್ಯಾಚಾರ, ಮಕ್ಕಳಿಗೆ ಈ ಸಂಸ್ಕಾರ ಮಾಡಿಸುವ ಸಾಂಪ್ರದಾಯ ಈಗಲೂ ನಡೆಯುತ್ತ ಬಂದಿದೆ. ಇವರುಗಳಿಗೆ ಶಿವಾತ್ಮ ಜ್ಞಾನವಿಲ್ಲ, ಶಿವ ಲಾಂಛನ ಲಕ್ಷಣ ಸೂಚಿಸುವದು. ಶಿವಾತ್ಮ ಜ್ಞಾನವಿದ್ದುದು ಸೂಚಿಸುವದು. ಪೂರ್ವಿಕರು ಮಾಡುತ್ತ ಬಂದುದು ಪರಂಪರೆ ಮಾಡುವದು ನಡೆದಿದೆ. ಹೃದಯ ಪರಿವರ್ತನೆ, ಅರು ಹೃದಯವಾಗುವದು ಅವಶ್ಯಕವಾದುದು. ಈಗಿನ ಸಮಯದಲ್ಲಿ ಬ್ರಾಹ್ಮಣರು ಉಪನಯನ ಮಾಡುವದು ಜನಿವಾರವ ಹಾಕುವದು, ಇತ್ತ ಅಯ್ಯಗಳು ಅಯ್ಯಾಚಾರ ಮಾಡಿ ಶಿವಲಾಂಛನ ಹಾಕುವದು ಕೆಲಬರಿಗೆ ಭಿಕ್ಷಾವೃತ್ತಿಗೆ ನಾಂದಿಯಾದಂತಾಗಿದೆ. ಶಿವ ಲಾಂಛನದ ರಹಸ್ಯವೆ ತಿಳಿಯದಂತಾಗಿ ಬಾಹ್ಯಕರ್ಮಿಗಳ ಕಾರ್ಯಕ್ಕೆ ಪ್ರಚೋದನೆಯಾಗಿ ಮನ ವಿರಕ್ತಿಗೆ ಮುಖವಿಲ್ಲವಾಗಿದೆ. ''ಅರಿಯ ಬಲ್ಲಡೆ ವಿರಕ್ತರೆಂಬೆನು. ಆಚಾರವನರಿವಡೆ ಅಭೇದ್ಯ

*ನೆಂಬೆನು. ಸ್ತುತಿನಿಂದೆಗೆ ಹೊರಗಾದಡೆ ಸುಮ್ಮಾನಿ ಎಂಬೆನು. ಘನ ತತ್ವವ ನರಿದು ಶಿಶು ಕಂಡ ಕನಸಿನಂತೆ ಇದ್ದಡೆ ಶಿವಜ್ಞಾನಿ ಎಂಬೆನಯ್ಯ ಅಮರೇಶ್ವರ.''*

**ನುಡಿದವರುಂಟೆ ? ಶಿವಲಾಂಛನಕ್ಕೆ ವೇಳ್ಯವ :** ಶಿವಜ್ಞಾನವದು ಶಿವಲಾಂಛನ ಇದಕ್ಕೇಕೆ ಶುಭ ಮುಹೂರ್ತ ? ಘನತತ್ವವದು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ, ಅರಿಯಬಾರದ ಘನ ವರಿಯಲು ಅದಕ್ಕೇಕೆ ಶುಭ ದಿವಸ ಶುಭ ವಾರ ?

ಸ್ತುತಿ ನಿಂದೆಗೆ ಹೊರಗಾದವನು ಸಮದರ್ಶಿಯು. ಸಮತೆಯೆ ತನ್ನಿರುವಾಗಿಹ ತಾನು ತನ್ನ ತಾ ತಿಳಿದವನು. ಶಬ್ದ ಅಪಶಬ್ದ ಶಬ್ದದಲ್ಲಿ ಕಂಡವನು. ಮಾತನಳಿಯ ಬಂದವನೆ ಶಿವಲಾಂಛನವ ಹಾಕಿಕೊಂಡವನು. ಅರಿಯ ಬಲ್ಲಡೆ ವಿರಕ್ತರೆಂಬೆನು ; ತಾನಾರೆಂದು ತನ್ನಿಂದ ತನ್ನ ಅರಿಯಬಲ್ಲಡೆ ವಿರಕ್ತರೆಂಬೆನು. ಶಿವಲಾಂಛನ ಹಾಕಿದವರೆಂಬೆನು ಎಂದು ಹೇಳಿಹಳು. ಅಮುಗೇಶ್ವರ ಲಿಂಗವನರಿದವರು ಅಗೋಚರ ಆಚಾರವ ನರಿತವರು, ನಿಜವರಿತವರು. ಅದು ದಿಟದ ಆಚಾರ ಒಡಲಳಿದ ಆಚಾರ, ನಿಜವರಿತವರ ಆಚಾರ, ಇಂತಪ್ಪ ಅಗೋಚರ ಆಚಾರವರಿತವರೆ ಶಿವಲಾಂಛನ ಹಾಕಿದವರು. ಅವನಿಗೇಕೆ ಬೇಕು ಶುಭ ಮುಹೂರ್ತವ ನೋಡುವುದು ಎಂದು ಹೇಳಿಹರು.

**ಕುಡಿದವರುಂಟೆ ಕಾಳಕೂಟ ವಿಷವ ಅಮೃತವ ಮಾಡಿ :** ಕಾಳಕೂಟ ವಿಷವ ಅಮೃತವ ಮಾಡಿ ಕುಡಿದವರುಂಟು. ಪೂರ್ವಕಾಲದಲ್ಲಿ ಹಿರಣ್ಯಕಶ್ಯಪ ಕೊಟ್ಟ ಕಾಳಕೂಟ ವಿಷವ ಹರಿನಾಮ ಬಲದಿಂದ ಅಮೃತವ ಮಾಡಿ ಕುಡಿದುದುಂಟು ಭಕ್ತ ಪ್ರಹ್ಲಾದ. ಗಂಡ ಕಳಿಸಿದ ಕಾಳಕೂಟ ವಿಷವ ಗುರು ಆಜ್ಞೆಯ ಮೇರೆಗೆ ಮೀರಾಬಾಯಿ ಅಮೃತವ ಮಾಡಿ ಕುಡಿದುದುಂಟು ಎಂದು ಹೇಳಿಹಳು.

**ಮಡದಿಯ ಜಂಗಮಕ್ಕೆ ಕೊಟ್ಟು ನೋಡಿದವರುಂಟೆ ? :** ನೋಡಿದವರುಂಟು ಪೃಥ್ವಿಯ ರಾಜರಾಜನು ತನ್ನ ಮಡದಿಯನ್ನು ಜಂಗಮಕ್ಕೆ ಕೊಟ್ಟುದು ಪುರಾಣದಿಂದ ಕೇಳಿಬಂದ ವಿಷಯ. ಇದು ಶೈವಭಕ್ತರ ನಿಷ್ಠೆ. ಜಂಗಮ ಕೊಟ್ಟುದು ಜಂಗಮಯ್ಯನಿಗೆ ಕೊಡುವ ನಿಷ್ಠೆ .

**ಹಡೆದ ಮಕ್ಕಳಕೊಂದು ಜಂಗಮಕ್ಕೆ ಉಣಲಿಕ್ಕಿದವರುಂಟೆ ? :** ಚಿಲ್ವಾಳ ಚಂಗಳೆಯೆಂಬ ದಂಪತಿಗಳು ಶೈವ ಭಕ್ತರು. ಜಂಗಮನಿಗೆ ಮಗುವ ಕೊಂದು ಉಣಲಿಕ್ಕಿದವರು. ಇವರು ಅನಾತ್ಮದಲ್ಲಿ ವೀರ ವೈರಾಗ್ಯವಂತರು. ಶರೀರವ ಹುಲ್ಲುಕಡ್ಡಿಯಂತೆ ಕಂಡವರು. ವೈರಾಗ್ಯದಲ್ಲಿ ಶ್ರೇಷ್ಠ ವಿದ್ದಂತೆ ಅರುವ ಅರಿತವರಲ್ಲ . ಇದು ಕಾರಣ ನೀವು ಸತಿ ಸುತರ ಕೊಡುವದು ಕೌತುಕವಲ್ಲವೆಂದು ಹೇಳಿಹರು.

**ಶಂಭುಜಕ್ಕೇಶ್ವರ ಎನ್ನೊಡೆಯನ ಸಾತ್ವಿಕ ಸದ್ಭಕ್ತಿಗೆ ನಮೋ ನಮೋ ಎಂಬೆನು :** ಶರಣರು ಎನ್ನೊಡೆಯನ ಸಾತ್ವಿಕ ಸದ್ಭಕ್ತಿಗೆ ಎಂದರಲ್ಲದೆ, ಶರೀರ ಶೋಷಣೆಗೆ ಶರೀರದ ತುಚ್ಛತೆಗೆ ಅಜ್ಞಾನಿಗಳಂತೆ ಶರೀರ ದಂಡನೆಗೆ ಮಹತ್ವ ಮಾಡಲಿಲ್ಲ. ಜ್ಞಾನ ಕ್ರಿಯೆ, ಜ್ಞಾನಾಚಾರಕ್ಕೆ ಮಹತ್ವ ಮಾಡಿದರು. ಶರಣರು ಅರುವ ಅರಿವ ಕ್ರಿಯಾಜ್ಞಾನಿಗಳಾದರು. ಅರಿಯಬಾರದ ಘನದಿರುವಾಗಿಹ ಅರುಹ ಅರಿಯುವ ಕ್ರಿಯೆ ಅವಶ್ಯವಾದುದು. ಅರಿಯಲಿಲ್ಲದ ಅರುವ ಅರಿವುದು ಅವಶ್ಯಕವಾದುದು. ಇಂತಪ್ಪ ಮಹದಿರುವ ಅರಿತು ಅರಿವ ಅರುಹಿಸಿಕೊಂಬ ಇವೆರಡನ್ನು ಅರಿಯದಂತಿದ್ದು ಅರಿಯಲಿಲ್ಲದ ಅರುವೆ ತಾನಾಗಿಹ ಸದ್ಭಕ್ತಂಗೆ ನಮೋ ನಮೋ ಎನುತಿರ್ದೆನು.



# ಅರಿವೇ ಗುರುವಾದವನಿಗೆ ಶೋಕ ಉಂಟೆ ?

**ಭಕ್ತರಿಗೆ ಅಕ್ಕೆ ಶೋಕ ದುಃಖ ಉಂಟೆ ಆಯ್ಯಾ?**
**ಅತ್ತು ಕಳೆವ ನೋವ ಹಾಡಿ ಕಳೆಯಲೇಕಯ್ಯ**
**ಈ ಮುಕ್ತಾಯಕ್ಕಗಳ ಕಕ್ಕುಲತೆಯ, ಶಂಭು ಜಕ್ಕೇಶ್ವರನ ಶರಣರೊಪ್ಪರಯ್ಯ.**

**ತಾತ್ಪರ್ಯ : ಭಕ್ತರಿಗೆ ಅಕ್ಕೆ ಶೋಕವುಂಟೆ ? :**

ಭಕ್ತರು ಗುರುಭಕ್ತರಿರಲಿ, ಲಿಂಗಭಕ್ತರಿರಲಿ, ಮಂತ್ರ ಭಕ್ತರಿರಲಿ ಅವರಿಗೆ ದುಃಖವುಂಟೆ , ನೋವುಂಟೆ ? ಗುರು ಭಕ್ತರಾರು ? ಲಿಂಗಭಕ್ತರು ಆರು ? ಮಂತ್ರ ಭಕ್ತರು ಆರು ?

'' ಗುರು ಪ್ರಾಣ ಗುರು ಪ್ರಾಣವೆಂಬರು ; ಗುರುವ ತನ್ನಲ್ಲಿ ಸಯವ ಮಾಡಲರಿಯದ ಗುರುಭ್ರಷ್ಟರ ನೋಡಾ. ಲಿಂಗಪ್ರಾಣ ಲಿಂಗ ಪ್ರಾಣವೆಂಬರು ಲಿಂಗವ ತನ್ನಲ್ಲಿ ಸಯವ ಮಾಡಲರಿಯದ ಲಿಂಗ ಭ್ರಷ್ಟರ ನೋಡಾ. ಮಂತ್ರ ಪಾಣ ಮಂತ್ರ ಪ್ರಾಣವೆಂಬರು ಮಂತ್ರವು ತನ್ನಲ್ಲಿ ಸಯವ ಮಾಡಲರಿಯದ ಮಂತ್ರ ಭ್ರಷ್ಟರು ನೋಡಾ ಈ ತ್ರಿವಿಧ ಸಂಬಂಧ ಒಂದೆಂದರಿಯದ ಪ್ರಾಣಲಿಂಗ ಸಂಬಂಧಿಗಳನೇನೆಂಬೆನಯ್ಯ. ''

ಮುಕ್ತಾಯಕ್ಕ ಗುರು ಭಕ್ತಳು ಅಹುದು. ಅಹುದೆಂಬೆನೆ, ಗುರುವ ತನ್ನಲ್ಲಿ ಸಯವ ಮಾಡಲರಿಯದ ಗುರುಭ್ರಷ್ಟಳು. ಗುರುಭ್ರಷ್ಟರಿಗೆ ಗುರುಭಕ್ತರು ಎಂಬುದು ಹೇಗೆ ? ಗುರು ಭಕ್ತಳಾಗಿದ್ದಲ್ಲಿ ಗುರುಘನವ ತನ್ನಲ್ಲಿ ತಾನಾಗಿ ತನ್ನ ಸ್ವರೂಪ ಮಾಡಿ ತಿಳಿಯಲಿ. ಗುರುದೇವನನ್ನು ಚಾರಿತ್ರ ಪುರುಷನಾಗಿ ನೋಡಿದಳಲ್ಲದೆ ಅಜಾತ ಅಂಗವಾಗಿ ತಿಳಿಯಲಿಲ್ಲ . ತನ್ನಂತರಂಗದಲ್ಲಿ ಸ್ವಸ್ವರೂಪ ಮಾಡಿ ಅರಿಯಲಿಲ್ಲ . ಇವರು ಗುರುವಿಂಗೆ ತನುವ ಕೊಡದವರು. ಮನವ ಲಿಂಗಕ್ಕೆ ಕೊಡದವರು. ಪ್ರಾಣವ ಜಂಗಮಕ್ಕೆ ಕೊಡದವರು. ಇವರು ಗುರು ಲಿಂಗ ಜಂಗಮದ ನಿಜದಿರುವ ತಿಳಿಯದವರು. ಏನಿದು ವಿಚಿತ್ರ! ಪ್ರಭುವಿನ ಕೂಡ ಸಂವಾದ ಮಾಡಿದ ಮುಕ್ತಾಯಕ್ಕಳ ಪರಿ ಈ ರೀತಿಯಾದಲ್ಲಿ ಇನ್ನುಳಿದವರ ಪಾಡೇನು ?

ಗುರುಭಕ್ತರಾದಲ್ಲಿ ಗುರುವಿನ ಗುರು ಬೇಗಲರಿವುದು, ಗುರುವಿನ ಗುರು : ಗುರುಶಿಷ್ಯರ ಮಧ್ಯದಲ್ಲಿದ್ದ ಸ್ವಯಂ ಜ್ಯೋತಿ ನಾ ನೀ ನೆಂಬುದಕ್ಕೆಡೆಗೊಡದ ಘನ. ಇಂಥಪ್ಪ ಕೇವಲ ಜ್ಯೋತಿ ವರ್ಣಾತೀತವ ತಿಳಿವುಡೆ ? ತಾನೇ ತನ್ನ ಸ್ವಸ್ವರೂಪಗಿಂತಧಿಕವಾದ ಪರದೈವವಿಲ್ಲ, ತಾನೆ ಅಪ್ರಮಾಣವಾಗಿರುವಲ್ಲಿ ತನ್ನಿರುವ ತಿಳಿಯಲು ಗುರುವಿಂಗೆ ತನುವ ಕೊಡಬೇಕು. ''ತನುವನೊಪ್ಪಿಸಿದನಯ್ಯ ಭಕ್ತನು, ತನ್ನ ಮನವನೊಪ್ಪಿಸಿದನಯ್ಯ ಭಕ್ತನು, ತನ್ನ ಧನವನೊಪ್ಪಿಸಿದನಯ್ಯ ಭಕ್ತನು, ತನ್ನ ಅಂತರಂಗದಾತ್ಮ ಸುಖಕ್ಕೆ ಈ ತ್ರಿವಿಧವನು ಶ್ರೀಗುರು ಹೇಳಿದಂತುಂಟು, ಬಿಟ್ಟ ವ್ರತಗೇಡಿಯ ತೋರದಿರು, ಕೂಡಲ ಚೆನ್ನಸಂಗಮದೇವಾ '' ಭಕ್ತರು ತನ್ನ ಅಂತರಂಗದಾತ್ಮ ಸುಖಕ್ಕೆ ತನು, ಮನ, ಧನವನೊಪ್ಪಿಸಿ ತನ್ನ ಅಂತರಂಗದಲ್ಲಿರುವ ಆತ್ಮರೂಪನಾದ ಗುರುಘನವ ತಿಳಿದು ಗುರುವಿಂಗೆ ಗುರುವಾದವರು ಗುರುಲಿಂಗವಾದವರು.

ಚಿನ್ಮಯಾತ್ಮರೂಪನಾದ ಲಿಂಗಘನವ ತಿಳಿದು ಲಿಂಗಕ್ಕೆ ಲಿಂಗವಾದವನು. ಸ್ವಯಂಲಿಂಗಿ

ಯಾದವನು. ತೆರಹಿಲ್ಲದಾತ್ಮರೂಪನಾದ ಜಂಗಮ ಲಿಂಗವ ತಿಳಿದು ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯವಾದವನು. ಇಂತಪ್ಪ ಸುಖದ ಅಮರ ಸುಖ, ಕೆಡದ ಸುಖ; ಅಭೇದ್ಯ ಸುಖವೆ ತನ್ನಿರುವು ಆಗಲು ಗುರುಘನನು. ತನು, ಮನ, ಧನವರ್ಪಿಸು ಎಂದು ಹೇಳಿದ್ದುಂಟು; ಬಿಟ್ಟ ವೃತಗೇಡಿಗಳ ತೋರದಿರು ಎಂದು ಬಿತ್ತರಿಸಿದುದು ನೋಡಿದಡೆ ಗುರುವಿಂಗೆ ಪ್ರಾಣ, ಲಿಂಗಕ್ಕೆ ಪ್ರಾಣ, ಮಂತ್ರಕ್ಕೆ ಪ್ರಾಣ, ಕೊಡುವ ಭಕ್ತರಿದ್ದರು. ಅದು ಭಕ್ತಿ ಪಥಕ್ಕೆ ಸಲ್ಲದ ವೇಷ. ಗುರುಭಕ್ತನಾಗಲಿ, ಲಿಂಗಭಕ್ತನಾಗಲಿ, ಮಂತ್ರಭಕ್ತನಾಗಲಿ, ಅರಿಯಲಿಲ್ಲದ ಅರುವ ಸ್ವೀಕರಿಸಿ ಅರಿಯಲಿಲ್ಲ ಮರೆಯಲಿಲ್ಲ. ಗುರುದೇವನನ್ನು ತನ್ನನ್ನು ಅರಿವ ಅರುಹಿಸಿಕೊಂಬುದ ಮಾಡಿ ಅರಿಯಲಿಲ್ಲ, ಅರಿಯಲಿಲ್ಲದ ಅರುವೆ ತನ್ನಿರುವು ಇದ್ದುದ ಮರೆಯಲಿಲ್ಲ . ಇವರು ನಿಜೈಕ್ಯರು. ಇಂತಪ್ಪ ಭಕ್ತರಿಗೆ ಅಕ್ಕೆ ಶೋಕವುಂಟೆ ?

**ಅತ್ತು ಕಳೆವ ನೋವ ಹಾಡಿ ಕಳೆಯಲೇಕಯ್ಯ :** *''ವಿಶ್ವಾಸವೆ ಭಕ್ತಿ, ಗುರು ಲಿಂಗ ಜಂಗಮ ಒಂದೆಂಬುದೆ ಜ್ಞಾನ ; ನಿರ್ವಂಚನೆಯೆ ವೈರಾಗ್ಯ. ಇದು ಸತ್ಯ ಶಿವಬಲ್ಲ, ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.''* ಗುರು ಭಕ್ತಿ, ವಿಶ್ವಾಸವೆ ಭಕ್ತಿ, ಗುರುದೇವನನ್ನು ಅರಿಯಲಿಲ್ಲದ ಅರುವೆಂದು ಸ್ವೀಕರಿಸುವದೆ ಭಕ್ತಿ . ಲಿಂಗವು ಅರಿಯಲಿಲ್ಲದ ಅರುವು ಎಂದು ಸ್ವೀಕರಿಸುವದೆ ಭಕ್ತಿ. ಜಂಗಮ ಅರಿಯಲಿಲ್ಲದ ಅರುವೆಂದು ಸ್ವಿಕರಿಸುವದೆ ಭಕ್ತಿ. ಈ ವಿಶ್ವಾಸ ಅಚಲವಾಗಿರಬೇಕು ವಜ್ರೋಪ ಸಮನಾದ ಶ್ರದ್ಧೆ ಇರಬೇಕು, ಈ ಮೂರನ್ನು ಸತ್ಯವಾಗಿ ಅರಿಯಲಿಲ್ಲದ ಅರುವೆ ಎಂದು ಅರಿಯಲು ತಾನೆ ಅಭೇದ್ಯ ಶಿವನೆಂಬುದು ತಾನೆ ಬಲ್ಲ . ಇಂತಪ್ಪ ಪರಮ ರಹಸ್ಯವರಿತು ತಾನು ಅರಿಯಲಿಲ್ಲದ ಅರುವಾಗಿಹುದೆ ನಿಜಭಕ್ತಿ. ಇಂತಪ್ಪ ಭಕ್ತಿ ಸಂಪನ್ನರಾದಲ್ಲಿ ಆರ ಸಲುವಾಗಿ ದುಃಖ ಮಾಡುವದು? ಗುರು ದೇವನಿಗಾಗಿ ದುಃಖ ಮಾಡುವುದೆ ? ***'ಗುರುಘನನು ಚಾರಿತ್ರ ಪುರುಷನಲ್ಲ'***, ತನ್ನ ಸಲುವಾಗಿ ದುಃಖ ಮಾಡುವದೆ ? ತಾನು ಗುರುವಿಂಗೆ ಗುರುವಾಗಿಹ ಗುರುಲಿಂಗ. ಈರ್ವರು ಒಂದೆ ; ಶಬ್ದಕ್ಕೆ ತೆರಹಿಲ್ಲದ ಮಹಾಘನವಾಗಿರುವಲ್ಲಿ ದುಃಖವೇಕೆ ? ಎಂದು ಸತ್ಯಕ್ಕ ಪ್ರಶ್ನಿಸಿಹಳು.

**ಈ ಮುಕ್ತಾಯಕ್ಕಗಳ ಕಕ್ಕುಲತೆಯ ಶಂಭು ಜಕ್ಕೇಶ್ವರನ ಶರಣರೊಪ್ಪರಯ್ಯ :** ಗುರು ಶಿಷ್ಯರ ಮಧ್ಯದಲ್ಲಿದ್ದ ವಸ್ತು ಗುರುವಿನ ಗುರು. ಇದು ಇಬ್ಬರ ಇರುವು ನಿರಂತರ ಇರುವು. ಈರ್ವರ ಅಂತರಂಗದಲ್ಲಿದ್ದ ನಿಕ್ಷೇಪ. ಲಿಂಗವೆನ್ನದ ಲಿಂಗ. ಲಿಂಗವೆಂದಲ್ಲಿಯೆ ತಪ್ಪಿದ ಲಿಂಗ. ಗುರುವೆನ್ನದ ಗುರು, ಗುರುವೆಂದಲ್ಲಿಯೆ ತಪ್ಪಿದ ಗುರುಲಿಂಗ, ಮಂತ್ರವೆನ್ನದ ಮಂತ್ರ. ಕಿವಿಗೆ ಕೇಳದ ಮಂತ್ರ. ಅರಿತಲ್ಲಿ ತಾನೆ ಗುರುಲಿಂಗವಾದುದು, ತಾನೆ ಸ್ವಯಲಿಂಗವಾದುದು, ತಾನೆ ನಿರ್ನಾಮಿ ಜಂಗಮ ಲಿಂಗವಾದುದು, ಇಂತಪ್ಪ ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದರಿದ ಶರಣ ಅಳುವದೇಕೆ ? ಅಳುವ ಕಳೆವುದೇಕೆ ? ನೋವ ಮಾಡಿಕೊಳ್ಳುವದೇಕೆ ? ಕಾರಣದಿಂದ ಕಾಯವ ಬಿಟ್ಟಡೆ ಶೋಕವೇಕೆ ? ಗುರುವಿಂಗೆ ಗುರುವಾಗಿಹ ಗುರುಲಿಂಗವೆ ತನ್ನಿರುವು ಆದ ಬಳಿಕ ಅಲ್ಲಿ ಗುರುವೆಂಬ ಪ್ರತಿಭಾವವಾಗಲಿ ಶಿಷ್ಯನೆಂಬ ಪ್ರತಿಭಾವವುಳ್ಳ ಪೂರ್ವಾಶ್ರಯ ಮೊದಲೆ ನಷ್ಟವಾಗಿರುವಲ್ಲಿ ಪುನಃ ಕಾಯಕ್ಕೋಸ್ಕರವಾದರೂ ಅಳಲುಂಟೆ ? ನೋವ ಹಾಡಲೇಕೆ ? ಪ್ರತಿಭಾವವೆ ಹುಸಿ. ಬಂಜೆಯ ಮಕ್ಕಳಿಗಾಗಿ ನೋವಿನ ಹಾಡು ಹಾಡಲೇಕೆ ? ಅಳುವ ಕುಕ್ಕಲತೆ ಮುಕ್ತಾಯಕ್ಕಗಳ ಕುಕ್ಕಲತೆ ಸರಿಯಾದುದಲ್ಲ ಇದಕ್ಕೆ ಶಂಭು ಜಕ್ಕೇಶ್ವರನ ಶರಣರೊಪ್ಪರಯ್ಯ.

ಗುರು ಭಕ್ತರಾದಲ್ಲಿ ; ತನ್ನಂತರಂಗದಲ್ಲಿ ಗುರುಲಿಂಗದುದಯವಾದಲ್ಲಿ ಶರಣರೊಪ್ಪುವರು, ಕಲ್ಪಿತರಾದಲ್ಲಿ ಶರಣರೊಪ್ಪರು, ಶಿಷ್ಯನಾದಲ್ಲಿ ಉಪದೇಶ ನಷ್ಟವಾಗಿರಬೇಕು, ಗುರುವಾದಲ್ಲಿ

ಅಬೋಧ, ಬೋಧಾಬೋಧ ನಷ್ಟವಾಗಿ ನಿರಂತರವಾಗಿಹ ಮಂಗಲಮಯ ತತ್ವ ತಾನಾಗಿರಬೇಕು. ಪರತತ್ವದ ಪರಿಣಾಮಿಯಾಗಿಹ ಗುರುಲಿಂಗವು ಶಿಷ್ಯನ ಕಂಡುದಿಲ್ಲ, ಗುರು ತಾನಾದುದಿಲ್ಲ , ತನ್ನಂತೆ ಸಕಲವು ಗುರುಲಿಂಗವಾಗಿರುವಲ್ಲಿ ಮುಕ್ತಾಯಕ್ಕಳ ಕಕ್ಕುಲತೆ ಸರಿಯಾದುದಲ್ಲ ಇದಕ್ಕೆ ಶರಣರೊಪ್ಪರಯ್ಯ ಎಂದು ಹೇಳಿಹಳು.



1. ತನಗೆ ನುಡಿದು ಹೇಳುವ ತನ್ನ ಜ್ಞಾನ

# ಅರಿವಿಲ್ಲದ ಲಾಂಛನ ವಿಷ ಬೆರೆಸಿದ ಹಾಲಿನಂತೆ ತನ್ನನ್ನು ಇತರರನ್ನು ಕೊಲ್ಲುತ್ತದೆ

**ಭವಿಯ ಬೆರಸಿದ ಭಕ್ತಿ, ಹವಿಯ ಬೆರಸಿದ ಬೀಜ,**
**ಉದಕ ಬೆರಸಿದ ಎಣ್ಣೆ ಜ್ಯೋತಿ ಪ್ರಜ್ವಲಿಸುವದೆ ?**
**ಭವಿಯಲ್ಲ ಭಕ್ತನಲ್ಲ, ಹವಿಯಲ್ಲ ಬೀಜವಲ್ಲ,**
**ಉದಕವಲ್ಲ ಎಣ್ಣೆಯಲ್ಲ ! ಒಡಲಿಚ್ಛೆಗೆ ಹೋಗಿ**
**ಭವಿಯ ಮನೆಗೆ ತುತ್ತಿಡುವ ನರಕಿಗಳಿಗೇಕೊಲಿವ ನಮ್ಮ ಶಂಭುಜಕ್ಕೇಶ್ವರಾ**

**ತಾತ್ಪರ್ಯ : ಭವಿಯ ಬೆರಸಿದ ಭಕ್ತಿ :**
ಆಶ್ಚರ್ಯ, ಮಹದಾಶ್ಚರ್ಯ ಕತ್ತಲೆಯ ಬೆರಸಿದ ಬೆಳಕು, ಇದೆಂಥ ಬೆಳಕು. ಬೆಳಕು ಇದ್ದಲ್ಲಿ ಕತ್ತಲೆ ಇರದು. ಕತ್ತಲೆ ಕೂಡಿಯೆ ಬೆಳಕು ಇದ್ದುದು ಆಶ್ಚರ್ಯವಲ್ಲವೆ ? ಹುಸಿಯ ಬೆರಸಿದ ದಿಟ , ಸುಳ್ಳು ಬೆರಸಿದ ಸತ್ಯ , ಶಬ್ದ ಬೆರಸಿದ ಸತ್ಯ, ಸತ್ಯ ಬೆರಸಿದ ಬೊಮ್ಮ . ಇದು ಆಶ್ಚರ್ಯವಲ್ಲವೆ ? ಹುಸಿ ಬೆರಸಿದುದು ನಿಜ ಹೇಗಾಗುವದು ? ಸುಳ್ಳು ಬೆರೆಸಿದುದು ಸತ್ಯ ಹೇಗಾಗುವದು ? ಶಬ್ದವ ಬೆರಸಿದುದು ಬೊಮ್ಮ ಹೇಗಾಗುವದು ಆಗುವದೆಂದಲ್ಲಿ ಭವಿಯ ಬೆರಸಿದ ಭಕ್ತಿ ಎನಿಸದು.

ಸಧ್ಯದ ಸಮಯದಲ್ಲಿ ಹುಸಿ ಬೆರಸಿದ ದಿಟ ಅದು ನಿಜವೆನಿಸಿದೆ. ''ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪೆಂಬ ಹುಸಿ ಎಂತು ಜನಸಿತೆಂದರಿಯೆನಯ್ಯ ಇಲ್ಲದ ಹೆಸರುಳ್ಳ ಚಿತ್ತಾರ ದಂತೆ ದೇಹ ನಾಮ ರೂಪವೀ ತೆರನೆಂದರಿಯದೆ ತೊಳಲಿ ಬಳಲುತಿರ್ದೆನಯ್ಯ ಕೂಡಲ ಚೆನ್ನ ಸಂಗಯ್ಯ ಸಂಸಾರ ಬಂಧನವೆನಗಿದೆ ಕಂಡಯ್ಯ. ''

ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪ ಎಂಬ ಹುಸಿ ಜನಿಸಿ ತೆಂದರಿಯೆನಯ್ಯ ಇದು ಇಲ್ಲದ ಹೆಸರುಳ್ಳ ಚಿತ್ತಾರವು ಎಂದು ತಿಳಿಯದವರು. ಅಸ್ತಿ ಭಾತಿ ಎಂಬ ತನ್ನ ಸತ್ಯ ಇದು ಅಭ್ಯೇದ್ಯ ಸತ್ಯವ ತಿಳಿಯದವರು. ಇವರದು ಭವಿಯ ಬೆರಸಿದ ಭಕ್ತಿಯಾಗಿದೆ. ಏಕೆಂದರೆ ಅಸ್ತಿ ಭಾತಿ ಎಂಬ ತನ್ನ ಸತ್ಯವು ನುಡಿಗೊಳಪಟ್ಟಿದೆ. ಇವರದು ಇತ್ತ ನಾಮರೂಪವು ಎಂಬ ಹುಸಿ ನುಡಿ ಗೊಳಪಟ್ಟಿದೆ. ನುಡಿಯಲ್ಲಿ ಸತ್ಯವಾಗಿಹುದು ನುಡಿಯಲ್ಲಿ ನಾಮರೂಪ ಹುಸಿಯಾಗಿಹುದರಿಂದ ತೆರ ಹಿಲ್ಲದಭವ ನುಡಿಗೆಡೆಗೊಡನು ಎಂಬರಿವು ಇವರಿಗೆ ವೇದ್ಯವಾಗಿರುವದಿಲ್ಲ, ಇದು ಕಾರಣ ಶಬ್ದ ನಷ್ಟವಾಗಲಿಲ್ಲ , ನುಡಿ ನಷ್ಟವಾಗಲಿಲ್ಲ , ನಡೆ ನಷ್ಟವಾಗಲಿಲ್ಲ , ಒಡಲು ನಷ್ಟವಾಗಲಿಲ್ಲ, ಇಂದ್ರಿ ಯಂಗಳ ಶುಭಾಶುಭ ಕ್ರಿಯೆ ನಷ್ಟವಾಗಲಿಲ್ಲ . ಅತೀಂದ್ರಿಯರಾಗಲಿಲ್ಲವಾದ್ದರಿಂದ ತೆರಹಿಲ್ಲದಭವ ನುಡಿಗೆಡೆಗೊಡದ ಘನವಾಗಿಹ ಅಸ್ತಿ ಭಾತಿ ಎಂಬ ಎನ್ನ ಸತ್ಯದಿರುವು ತಾನಾಗದ್ದರಿಂದ ಇದು ಹುಸಿ ಬೆರಸಿದ ದಿಟ ವೆನಿಸುವದು, ಭವಿ ಬೆರಸಿದ ಭಕ್ತಿ ಎನಿಸುವದು ಎಂದು ಹೇಳಿಹಳು.

**ಹವಿಯ ಬೆರಸಿದ ಬೀಜ :** ಹಾಲು ಬೆರಸಿದ ಬೀಜ. ಇದು ವಿಷದ ಬೀಜ, ವಿಷಯಾದಿಗ ಳಿಗೆ ಒಪ್ಪಿದ ಬೀಜ. ಇದು ಬೇವಿನ ಬೀಜ . ಈ ಬೀಜಕ್ಕೆ ಹಾಲು ಬೆರಸಿದಲ್ಲಿ ಕಹಿ ತೋರುವದಲ್ಲದೆ

ರುಚಿ ತೋರದು. ಹಾಗೆ ಹಾಲು ಅದು ಅಮೃತ, ಅಮರ ರಸ, ಚಿದ್ರಸ ಸುಖದ ಸುಖವಾಗಿಹ ಸುಖದೇಕ ರಸ ರೂಪಿ ಹಾಲು. ಇಂತಪ್ಪ ಸ್ವಾನುಭವ ಹಾಲು ಗುರುಲಿಂಗ. ಮಾತೆಂಬುದು ಜ್ಯೋತಿರ್ಲಿಂಗ . ನುಡಿದು ನುಡಿಯದಂತಿದ್ದ ನಿಃಶಬ್ದ ಬ್ರಹ್ಮ ಶಬ್ದಕ್ಕೆ ಹವಿಯ ಬೀಜವೆನಿಸುವದು. ಭಾವಕ್ಕಗಮ್ಯವಾದುದು ಪ್ರತಿಭಾವವುಳ್ಳದ್ದಾಗಿರುವುದೆ ಹವಿಯ ಬೆರಸಿದ ಬೀಜವಾಗಿದೆ. ಅಚಿಂತ್ಯಾತ್ಮವಾದುದು ಚಿಂತನಕ್ಕೊಳಪಡಿಸಿದುದೆ ಹವಿಯ ಬೆರಸಿದ ಹಾಲು ಎಂದು ತಿಳಿವುದು. ತನುವಿನ ತನುವಾದುದು ಮನದ ಮನವಾದುದು ಜೀವದ ಜೀವವಾದುದು, ಇದು ಗುರುಲಿಂಗವು, ಸ್ವಯಲಿಂಗವು, ಜಂಗಮ ಲಿಂಗವು. ಈ ತ್ರಿವಿಧವ ತನ್ನೊಳಗೆ ಕಾಣುವದು. ಕಾಣಬಾರದ ಘನವೆ ತನ್ನಿರುವು ಆದುದು. ಇಂತಪ್ಪ ರಹಸ್ಯವರಿಯದೆ ತೋರಿಕೆಗೆ ಒಪ್ಪಿಕೊಂಡುದು ಹಾಲು ಬೆರಸಿದ ಬೀಜ ವೆನಿಸುವದು.

**ಉದಕ ಬೆರಸಿದ ಎಣ್ಣೆ ಜ್ಯೋತಿ ಪ್ರಜ್ವಲಿಸುವದೇ ? :** ಉದಕ ಬೆರಸಿದ ಎಣ್ಣೆಯಿಂದ ಅದೆಂತು ಜ್ಯೋತಿ ಪ್ರಜ್ವಲಿಸುವದು ? ಗುರುವಿನಲ್ಲಿ ನಿಷ್ಠೆ ಇಲ್ಲದ ಭಕ್ತಿ, ಲಿಂಗದಲ್ಲಿ ನಿಷ್ಠೆ ಇಲ್ಲದ ಭಕ್ತಿ ಜಂಗಮದಲ್ಲಿ ನಿಷ್ಠೆ ಇಲ್ಲದ ಭಕ್ತಿ, ಪ್ರಸಾದದಲ್ಲಿ ನಿಷ್ಠೆ ಇಲ್ಲದ ಭಕ್ತಿ , ಅದೆಂತು ಅರುವಿಂಗರುವಾಗಿಹ ಮಹದಿರುವು ಪ್ರಜ್ವಲಿಸುವದು ? ದೇಹಿಗೆ ದೇಹಿಯಾಗಿಪ್ಪುದು ಅದೆಂತು ಪ್ರಜ್ವಲಿಸುವದು ? ಅಂತರಂಗದಲ್ಲಿ ಗುರುಲಿಂಗ ಉದಯವಾಗದು ಮನ ನಷ್ಟವಾಗಿ ಸ್ವಯಲಿಂಗ ಉದಯವಾಗದು, ಭಾವಕ್ಕಗಮ್ಯವಾಗಿಹ ನಿರ್ನಾಮ ಜಂಗಮ ಲಿಂಗ ಪ್ರಜ್ವಲಿಸದು. ಈ ಮೂರೊಂದಾದ ತೆರಹಿಲ್ಲದ ಮಹಾಲಿಂಗ ಪ್ರಜ್ವಲಿಸದು ಎಂದು ಹೇಳಿಹಳು.

ಭವಿಯಲ್ಲ ಭಕ್ತನಲ್ಲ ,ಹವಿಯಲ್ಲ ಬೀಜವಲ್ಲ , ಉದಕವಲ್ಲ ಎಣ್ಣೆಯಲ್ಲ , ಒಡಲಿಚ್ಚೆಗೆ *ಹೋಗಿ ಭವಿಯ ಮನೆಗೆ ತುತ್ತಿಡುವ ನರಕಿಗಳಿಗೇಕೊಲಿವ ನಮ್ಮ ಶಂಭುಜಕ್ಕೇಶ್ವರನು :* ಹುಸಿಯುಳ್ಳದ್ದು ಹುಸಿಯೆ, ದಿಟವು ದಿಟವೆ, ಹುಸಿಯಾದುದನರಿಯ. ಬಂಜಿ ಮಗ ಆದುದನರಿಯ, ಹೋದುದನರಿಯ, ಮೃಗಜಲ ಆದುದನರಿಯ, ಹೋದುದನರಿಯೆ, ಬಂದುದನರಿಯೆ, ನಿಂದುದನರಿಯೆ. ಒಳಗನರಿಯೆ, ಹೊರಗನರಿಯೆ. ಭಾವವನರಿಯೆ, ನಿರ್ಭಾವವನರಿಯೆ, ಶೂನ್ಯವನರಿಯೆ, ನಿಶೂನ್ಯವನರಿಯೆ. ಹುಸಿಯಾದುದು ಇಲ್ಲದ ಹೆಸರುಳ್ಳ ಚಿತ್ತಾರವು. ದೇಹ ನಾಮ ರೂಪ ಈ ರೀತಿ ತಿಳಿದಲ್ಲಿ ಭವಿಯಲ್ಲ , ಭಕ್ತನಲ್ಲ, ಬೆಳಗು ಉದಯಾಸ್ತವಿಲ್ಲದ ಬೆಳಗು. ಅಲುಪ್ತ ಬೆಳಗು. ಕಂದದ ಬೆಳಗು, ಅಂದು ಇಂದು ಎಂದೆಂದೂ ಇದ್ದಂತಿದ್ದ ಬೆಳಕು. ಇದು ಬೆಳಕೆನ್ನದ ಬೆಳಕು. ಇದುವೆ ತೆರಹಿಲ್ಲದಭವ ನುಡಿಗೆಡೆಗೊಡನು ಅವನು ಭಕ್ತನಲ್ಲವೆಂದು ಹೇಳಿಹಳು.

**ಹವಿಯಲ್ಲ ಬೀಜವಲ್ಲ :** ಬ್ರಹ್ಮವೆಂಬುದು ಬೀಜವಲ್ಲ, ಲಿಂಗವೆಂಬುದು ಲಿಂಗವಲ್ಲ, ಗುರುವೆಂದುದು ಗುರುವಲ್ಲ, ಉದಕವಲ್ಲ , ಎಣ್ಣೆಯಲ್ಲ, ಶಬ್ದವದು ಸ್ವಾನುಭವವಾಗದು. ಸ್ವಾನು ಭವ ಉದಕವಾಗದು. ಸ್ವಾನುಭವವಿಲ್ಲದುದು ಭಕ್ತಿಯಾಗದು. ಭಕ್ತಿಯಿಲ್ಲದ ಸ್ವಾನುಭವ, ಸ್ವಾನುಭವವಿಲ್ಲದ ಭಕ್ತಿ ಇವು ಇದ್ದಲ್ಲಿ ತೆರಹಿಲ್ಲದಭವ ಪ್ರಜ್ವಲಿಸನು. ಇದು ಕಾರಣ ಇವರುಗಳು ಒಡಲಿಚ್ಚೆಗೆ ಅಜ್ಞಾನಿಗಳ ಆಸ್ತೀಕರಲ್ಲದವರ ಮನೆಯಲ್ಲಿ ಬೋಧ ಮಾಡುವವರು ಇವರು ನರಕಿಗಳು. ದೇಹ ಬುದ್ದಿಯುಳ್ಳವರು, ದೇಹಾಭಿಮಾನಿಗಳು. ಇವರುಗಳಿಗೆ ಶಂಭುಜಕ್ಕೇಶ್ವರನು ಒಲಿಯನೆಂದು ಹೇಳಿಹಳು.



# ಸಿಂಹದ ಕನಸ ಕಂಡು ಆನೆ ಸತ್ತಂತೆ

**ಮಂತ್ರ ಭಿನ್ನ ವಾಯಿತ್ತೆಂದು ಕಂಥೆಯ ಬಿಡುವರೆ ? ಅರಿವುಳ್ಳವರು.**
**ಅದು ದ್ವೇಷವಲ್ಲದೆ ಅರುವಿಂಗೆ ಸಂಬಂಧವಲ್ಲ. ''ಮಂತ್ರಮಧ್ಯೆ**
**ಭವೇ ಲಿಂಗಂ ಲಿಂಗ ಮಧ್ಯೇ ಭವೇನ್ಮಂತ್ರಂ ಮಂತ್ರಲಿಂಗದ್ವಯೋರೈಕ್ಯಂ**
**ಇಷ್ಟಲಿಂಗಂತು ಶಾಂಕರಿ '' ಎಂದುದಾಗಿ, ಆ ಮಂತ್ರ ಸರ್ವರ ಆಧಾರ**
**ಸರ್ವರ ಆತ್ಮ ಬೀಜವೆಂದರಿಯದೆ, ಕೇಸರಿಯ ಕನಸ ಕಂಡ ವಾರಣದಂತೆ**
**ಈ ಭಾಷೆ ಹೀನರಿಗೇಕೆ ಶಂಭುಜಕ್ಕೇಶ್ವರನು.**

**ತಾತ್ಪರ್ಯ : ಮಂತ್ರಭಿನ್ನವಾಯಿತ್ತೆಂದು ಕಂಥೆಯ ಬಿಡುವರೆ ? ಅರಿವುಳ್ಳವರು :** ಪೂರ್ವದಿಂದಲೂ, ಮಂತ್ರ ಸಂಸ್ಕಾರ ಮಾಡುವದು ಬಂದಿದೆ, ಮಂತ್ರ ಸಂಸ್ಕಾರವಾದ ಮಾತ್ರಕ್ಕೆ ಮಂತ್ರವ ತಿಳಿಯಲಿಲ್ಲವಾದ್ದರಿಂದ ಮಂತ್ರ ಬೇರೆ, ಹರಕು ಬಟ್ಟೆಯ ರೂಪದಲ್ಲಿಯ ದೇಹ ಬೇರೆ ಎಂದು ತಿಳಿದು ದೇಹ ಬಿಡುವರೆ ಅರಿವುಳ್ಳವರು. ''ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರು ಪ್ರಣವದರ್ಥವ ತಿಳಿದು ನೋಡಿರೆ ? ಪ್ರಣವ ನಾಹಂ ಎಂದುದೆ? ಪ್ರಣವ ಕೋಹಂ ಎಂದುದೆ? ಪ್ರಣವ ಸೋಹಂ ಎಂದುದೆ? ಪ್ರಣವ ಚಿದಹಂ ಎಂದುದೆ? ಪ್ರಣವ ಭರ್ಗೋದೇವಸ್ಯಧೀಮಹಿ ಎಂದುದದು ಪ್ರಣವದರ್ಥವು ತಾನೆ ನಿಮ್ಮ ಮಯವು ಗುಹೇಶ್ವರಾ '' ಆರು ಪ್ರಣವದರ್ಥವು ತಿಳಿದು ನೋಡಿಹರು ತಾನೆ ಮಯನು ತಾನೆ ತುಂಬಿದವನು.

''ತುಂಬಿದುದು ತುಳುಕದು ನೋಡಾ, ನಂಬಿದುದು ಸಂದೇಹಿಸದು ನೋಡಾ, ಒಲಿದುದು ಓಸರಿಸದು ನೋಡಾ ನೆರೆ ಅರಿದುದು ಮರೆಯದು ನೋಡಾ ಚೆನ್ನಮಲ್ಲಿಕಾರ್ಜುನಯ್ಯ ನೀ ನೊಲಿದ ಶರಣಂಗೆ ನಿಸ್ಸೀಮ ಸುಖ ನೋಡಯ್ಯ.''

ಮಂತ್ರವ ತಿಳಿದು ಮಂತ್ರ ತಾನೆ ಆದವರು ಶರಣರು, ಶರಣೆಯರು. ಇದು ಕಾರಣ ''ಓಂ ಪೂರ್ಣಮದಃ ಪೂರ್ಣಮಿದಂ! ಪೂರ್ಣಾತ್ ಪೂರ್ಣ ಮುದಚ್ಯತೇ, ಪೂರ್ಣಸ್ಯೆ ಪೂರ್ಣ ಮಾದಾಯ ಪೂರ್ಣಮೇವಾವ ಶಿಷ್ಯತೇ ಓಂ ಶಾಂತಿಃ ಶಾಂತಿ ಃ ಶಾಂತಿ '' ಎಂದು ಬಿತ್ತರಿಸಿದುದು ನೋಡಿದಡೆ ಮಂತ್ರವೆಂದರೆ ಪೂರ್ಣ. ಪೂರ್ಣವೆಂದರೆ ತಾನೆ.

ಪೂರ್ಣಾತ್ ಪೂರ್ಣ ತಾನೆ. ತನ್ನ ಹೊರ್ತು ಅನ್ಯ ಆವುದು ಇಲ್ಲದಿರುವಲ್ಲಿ ಮಂತ್ರ ಭಿನ್ನ ವಾಯಿತ್ತೆಂದು, ಕಂಥೆಯ ಬಿಡುವರೆ ಅರುವುಳ್ಳವರು.

**ಅದು ದ್ವೇಷವಲ್ಲದೆ ಅರುವಿನ ಸಂಬಂಧವಲ್ಲ:** ದೇಹದಂಡನೆ ಮಾಡುವದು ಅಜ್ಞಾನವಲ್ಲದೆ ಜ್ಞಾನವಲ್ಲ. ಮಂತ್ರ ಭಿನ್ನವಾಯಿತ್ತೆಂದು ಕಂಥೆಯ ಬಿಡುವರೆ ಅರುವುಳ್ಳವರು.

ಮಂತ್ರದ ರಹಸ್ಯವು ವೇದ್ಯವಾಗುವುಡೆ **ಮಂತ್ರವದು ಸರ್ವರ ಆಧಾರ, ಸರ್ವರ ಆತ್ಮ ಬೀಜವೆಂದರಿಯದೆ ಕೇಸರಿ ಕನಸ ಕಂಡ ವಾರಣದಂತೆ :** ಮಂತ್ರವದು ಸರ್ವರ ಆಧಾರ ;ಅರಿದಡೆ ಮಂತ್ರವು ತಾನೆ ಮಯವು ಸರ್ವರ ಆತ್ಮವೆ ಮೂಲವೆಂದರಿಯುವುಡೆ.

ಆನೆಯು ಸಿಂಹದ ಕನಸ ಕಂಡರೆ ಸಾಕು ಅದು ಪೂರ್ಣ ಭಯವಾಗಿ ಪ್ರಾಣವ ಬಿಡು

ವದು. ಹಾಗೆ ಮಂತ್ರದರ್ಥವ ತಿಳಿವುಡೆ ದೇಹವದು ಹರಕು ಬಟ್ಟೆಯು. ಆದರೂ ಅದನ್ನು ಬಿಡುವವರೆ ಅರುವುಳ್ಳವರು. ಈ ಹರಕು ಬಟ್ಟೆಯಂತಿರುವ ದೇಹ ಆದುದ ನರಿಯೆ ಹೋದುದನರಿಯ, ಬಂದುದನರಿಯ ನಿಂದುದನರಿಯ. ಇಲ್ಲದ ಹೆಸರುಳ್ಳ ಚಿತ್ತಾರದಂತೆ ಎಂದು ತಿಳಿಯುವತನಕ ಇದು ಆನೆಗೆ ಸಿಂಹದ ಸ್ವಪ್ನ ಬಿದ್ದರೆ ಅದು ತಕ್ಷಣ ಪ್ರಾಣಬಿಡುವದು. ಹಾಗೆ ನಾನೆಂಬ ಆನೆಗೆ ನಾನೀನೆಂಬುದಕ್ಕೆಡೆ ಗೊಡದ ಮಹಾ ಘನರೂಪಿ ಸಿಂಹದ ವಿಚಾರ ಮಾಡಿದರೆ ಸಾಕು ಅದು ಆನೆಂಬ ಕಲ್ಪಿತರೂಪಿ ಜೀವನು ತನ್ನಷ್ಟಕ್ಕೆ ತಾನು ನಾಶವಾಗುವದು. ಸೂರ್ಯನ ಉದಯ ಮಾತ್ರದಿಂದ ಕತ್ತಲೆಯು ಸ್ವಾಭಾವಿಕ ನಷ್ಟವಾಗುವುದು.

**ಈ ಭಾಷೆ ಹೀನರಿಗೇಕೆ ಶಂಭುಜಕ್ಕೇಶ್ವರನು :** ಸಟೆಗೆ ದಿಟ ಮಾಡಿದವರು, ದಿಟವ ಸಟೆಯ ಮಾಡಿದವರು ಭಾಷೆ ಹೀನರು. ಕನಸಿನ ಸಿಂಹವ ಕಂಡು ಆನೆ ಸತ್ತಂತೆ. ಈ ಭಾಷೆ ಹೀನರ ಸಂಸಾರವದು ಕನಸು, ಕನಸು ಇವರಿಗೆ ಸತ್ಯವಾಗಿದೆ. ತೋರುವ ಸಂಸಾರ , ತೋರುವ ತಾಪತ್ರಯ, ಆದಿ ಮಧ್ಯ , ಅಂತ್ಯ ಹುಟ್ಟುವುದು, ಸಾಯುವುದು, ರಾಗ-ದ್ವೇಷ , ಮಾನ , ಅಪಮಾನ , ಲಾಭ ಹಾನಿ, ಬಡತನ-ಸಿರಿತನ, ದೇಹಕ್ಕೆ ಆಗುವ ಆಗು ಹೋಗುಗಳು ಇದೊಂದು ಕನಸು.

ಕನಸಿನಲ್ಲಾಗುವ ದುರಂತವೆ ಸಿಂಹ ಕಂಡು ಆನೆ ಹೇಗೆ ಸತ್ತಿತೊ ಹಾಗೆ ಪ್ರಪಂಚ ತೋರಿಕೆಗೆ ಒಪ್ಪಿಕೊಂಡು, ಭಯ ಭೀತರಾಗಿ ತಾನಾರೆಂದು ಎಚ್ಚರವಾಗದೆ ಕೇವಲ ಕನಸಿನ ಪ್ರಪಂಚಕ್ಕಾಗಿ ಸತ್ತು ಹೋಗುವ ಈ ಭಾಷೆ ಹೀನರಿಗೇಕೆ ಮಂತ್ರದ ರಹಸ್ಯ ತಿಳಿಯಬೇಕಾಗಿದೆ. ಆತ್ಮನ ನಿಜದಿರುವು ತಿಳಿಯುವದಾದರೂ ಏಕೆ ಬೇಕು? ನಿರಂತರ ಇದ್ದ ಆತ್ಮನಾದ ತನ್ನಿರವು ತನಗೆ ವೇದ್ಯವಾದಡೆ, ಆನೆಯೂ ಇಲ್ಲ , ಕನಸು ಇಲ್ಲ , ಸಿಂಹವೂ ಇಲ್ಲ , ಅಂಜಿದುದು ಇಲ್ಲ, ಸತ್ತದು ಇಲ್ಲ ಎಂದು ಹೇಳಿಹಳು.

ಪ್ರಪಂಚ ಪರಮಾರ್ಥದಲ್ಲಿ ನಡೆಯುವ ಕಾರ್ಯ ಕಾರಣಂಗಳೆಲ್ಲ ಕನಸು. ಹಗ್ಗದಲ್ಲಿ ತೋರುವ ಹಾವು ಎಚ್ಚರವಾಗುವವರೆಗೂ ಕಾಣಿಸುವುದು. ಕಂಡರು ಅದು ಭ್ರಮ ರೂಪವು. ಹಾಗೆ, ತೆರಹಿಲ್ಲದಭವ ನುಡಿಗೆಡೆಗೊಡನೆಂಬ ಕಲ್ಪನಾರಹಿತದಲ್ಲಿ, ಕಲ್ಪಿತ ಕಲ್ಪನೆ ಅವುಗಳೆಲ್ಲವು ಹುಸಿಯ ತೋರಿಕೆ. ಆನೆಯು ಹುಸಿ, ಸಿಂಹವೂ ಹುಸಿ, ಕಂಡ ಕನಸು ಹುಸಿ, ಅದುವೆ ಹುಸಿಯಾದಲ್ಲಿ ಹುಟ್ಟಿದುದು ಹುಸಿ, ಬದುಕಿದುದು ಹುಸಿ, ಸತ್ತುದು ಹುಸಿ ಎಂಬುದು ತನ್ನಿಂದ ತನಗದು ವೇದ್ಯವಾಗುವುಡೆ ತಾನೆ ನಿರಂತರ , ತಾನೆ ತೆರಹಿಲ್ಲದಭವ ನುಡಿಗೆಡೆಗೊಡನು ಎಂಬುದು ಈ ಭಾಷೆ ಹೀನರಿಗೇಕೆ ಈ ತೆರಹಿಲ್ಲದಭವನ ಅರಿವುದು ? ಎಂದು ಹೇಳಿಹಳು.



# ಮಾತಿಲ್ಲದ ಗಂಡನ ಸುಖ

**ಮೆಚ್ಚಿ ಗ್ರಾಹಿಗೊಂಡೆನು ನಿಮಗಾನು ! ನಲ್ಲನೆ,**
**ಒಚ್ಚತ ವೋದವಳ ನುಳಿವರೆ ?**
**ವಿಕಳಗೊಂಡೆನು ಶಿವಶಿವಾ, ಪ್ರಾಣಪದವಲ್ಲದೆ ಮತ್ತೊಂದರಿಯೆನು**
**ಮನ ವಚನ ಕಾಯದಲ್ಲಿ, ಉಚಿತವೆ ನಿಮಗೆ ಪುರುಷಲಕ್ಷಣವೆ ?**
**ಅತಃಪರಗಂಡರ ನಾನು ಬಲ್ಲಡೆ ಕರ್ತು**
**ನಿಮ್ಮಾಣೆಯಯ್ಯಾ ಶಂಭುಜಕ್ಕೇಶ್ವರಾ.**

**ತಾತ್ಪರ್ಯ :**

ಓ ನಲ್ಲನೆ ! ನಿಮಗಾನು ಮೆಚ್ಚಿ ನಿನ್ನ ಸ್ವೀಕರಿಸಿರುವೆ. ನಿನ್ನ ಅಪ್ಪಿ ತೃಪ್ತಿಯಾಗುವುದೊಂದೆ ನನ್ನ ಬಾಯಾರಿಕೆ ನನ್ನ ಹೃದಯದ ಹಂಬಲ. ನೀನು ತೆರಹಿಲ್ಲದಭವ. ನಿನ್ನ ಅಭವ ತನಕ್ಕೆ ಮೆಚ್ಚಿ ರುವೆ ಅಪ್ಪಿರುವೆ, ಅಪ್ಪಿ ಅಪ್ಪಿ ನಿಮ್ಮನ್ನು ಬಿಡದಂತಾಗಿದೆ ನಿಮ್ಮಿಂದಗಲದಂತಾಗಿದೆ. ನಿನ್ನ ಅಪ್ಪಿ ಬಹು ತೃಪ್ತಿಯ ಬಯಕೆ ಮಾಡಿರುವೆ. ಇದು ನನಗೆ ಹಿತಕರವೆನಿಸಿದೆ. ನಿಮಗಾನು ಒಲಿತು ಬಂದಿರುವೆ. ಮನಸೋತು ಬಂದಿರುವೆ ಹೃದಯಕ್ಕೆ ಹೃದಯ ಒಪ್ಪಿ ಬಂದಿರುವೆ. ನಿಮಗಾನು ಮೀಸಲವಾಗಿ ರುವೆ. ಇಷ್ಟು ಹೃದಯ ಬಿಚ್ಚಿ ಮಾತಾಡಿದರೂ ನೀನು ಮೌನವೆ ! ನಿಮಗೋಸ್ಕರ ನನ್ನ ಭಾವ ಪರ ವಶವಾಗಿದೆ. ಮನ ತನ್ನ ಮೈಮರತಿದೆ.

ಓ ನಲ್ಲನೆ ! ನಿನ್ನ ಅಗಲುವಿಕೆಯಿಂದಾದ ನೋವು ನಾನಾರಿಗೆ ಹೇಳುವದು ? ನಿಮ್ಮನ್ನಗಲುವಿಕೆ ಎನ್ನ ಪ್ರಾಣದ ಹೋಕು ನೋಡಾ. ಆಶ್ಚರ್ಯ ಮಹದಾಶ್ಚರ್ಯ. [1] ಅವ್ಯಕ್ತ ಗಂಡ [1], [2] ವ್ಯಕ್ತ ಹೆಂಡತಿ [2]. ತೋರಬಾರದ ಗಂಡ, ತೋರುವ ಹೆಂಡತಿ, ಮಾತಿಲ್ಲದ ಗಂಡ, ಮಾತನಾಡುವ ಹೆಂಡತಿ. ಕಲ್ಪಿತ ಹೆಂಡತಿ, ಕಲ್ಪನಾರಹಿತ ಗಂಡ. ಭಾವಕ್ಕ ಗಮ್ಯನಾಗಿಹ ಗಂಡ, ಭಾವ ರೂಪ ಹೆಂಡತಿ. ಇವರೀರ್ವರ ಸಾಮರಸ್ಯ ಅದಾರು ಕಾಣುವದು ? ಇವರೀರ್ವರ ವಿರಸ ಅದಾರು ಕಾಣುವದು ? ಇವರೀರ್ವರ ವಿಯೋಗ ಅದಾರು ಕಾಣುವದು ?

ಇದು ಮಾತನಳಿಯಲು ಬಂದವರ ಅನುಭಾವ. ಕಲ್ಪಿತ ನಷ್ಟ ಮಾಡಲು ಬಂದವರ ಅನು ಭಾವ. ಇದು ಅರು ಹೃದಯರಾಗಿ ಅರುವಿಂಗರುವಾಗಿಹ ಮಾತಿಲ್ಲದ ಗಂಡನಲ್ಲಿ ಒಂದಾಗುವ ತವಕ. ಈ ಗಂಡ ಹೊರಗಿಲ್ಲ . ಹೊರಗೆ ತೋರುವ ಗಂಡನಲ್ಲ ತನ್ನ ಅಂತರಂಗದಲ್ಲಿದ್ದ ಗಂಡ . ಇವನ ನಿವಾಸ ಎಲ್ಲೆಲ್ಲೂ ನಿವಾಸ . ನಿವಾಸವಾಗಿದ್ದರೂ ಇವನೊಬ್ಬ ಬೇರೆ, ತಾನೊಂದು ಬೇರೆ ಯಾದರೆ ಕಾಣುವ ಗಂಡನಲ್ಲ. ತನ್ನ ಹೆಂಡತಿ ತನ್ನ ಕಳಕೊಂಡು ಇವನ ಕಾಣಬೇಕು.

ಇವ ಗಂಡ ನಾನು ಹೆಂಡತಿ ಎಂದರೆ ಒಪ್ಪಿಕೊಳ್ಳದ ಗಂಡ. ನೀನು ಪರಮನು, ನಾನು ಜೀವನು ಎಂದರೂ ಒಪ್ಪಿಕೊಳ್ಳದ ಗಂಡ ಮಾತಾಡದ ಗಂಡನು ಮೌನವಾಗಿಹ ಗಂಡನು ನಾನು ಮರವು ನೀನು ಅರುವು. ನಾನು ನಾಶವುಳ್ಳವ ನೀನು ಅವಿನಾಶಿ ಎಂದರೂ ಒಪ್ಪಿಕೊಳ್ಳದ ಗಂಡನು. ಇವನು ಮೌನವಾಗಿಹ ಗಂಡನೆಂದರೂ ಇದ್ದಂತಿರುವವನು. ಮೌನವೆಂದು ಮಾತಿಗೊಳಪಡಿಸಿದರೂ

ಮೌನವೆ. ಈ ಮೌನದ ರಹಸ್ಯ ತಿಳಿಯುವುದೆ ಗಂಡ ಹೆಂಡಿರ ಸಾಮರಸ್ಯ. ಇವನದು ನಿರಂತರ ಮೌನ. ಈ ಸಂಜ್ಞೆಯಿಂದ ತಾನು ಮಾತಾಡದವನಾಗುವುದು. ಆಗ ತನ್ನ ಮಾತು ನಿಷ್ಪ್ರಯೋಜಕ ವಾಗಿ ನೆನೆಹು ನಿಷ್ಪ್ರಯೋಜಕವೆಂದೆನಿಸಿ ಭಾವಕ್ಕಿಂಬಿಲ್ಲವಾಗಿ ತನ್ನ ಅರಿವ ಅರುಹಿಸಿಕೊಂಬುದು ನಿಷ್ಪ್ರ ಯೋಜಕವಾಗಿ ತನಗೆ ಮಾತಿಲ್ಲದವನ ಅರುವಾಗಿ ತಾನು ಮಾತಿಲ್ಲದವನಾದಲ್ಲಿ ಸಾಮರಸ್ಯ. ಇಂತಪ್ಪ ಸಾಮರಸ್ಯ ಸುಖವೆ ಶರಣರ ಪ್ರಾಣ ಪದವಾಗಿದೆ.

ಇದು ಅಗಣಿತವಾಗಿದೆ ಅಪರಮಿತವಾಗಿದೆ. ಇಂತಪ್ಪ ತೆರಹಿಲ್ಲದಭವ ನುಡಿಗೆಡೆಗೊದ ಮಹದಿರುವ ತನಗೆ ತಾನೆ ನಿಶ್ಚೈಸುವದು. ತನಗೆ ತಾನೆ ತಾನೇ ತಾನಾಗುವುದು. ತನಗೆ ತಾನೆ ಮಾತಾಡುವದು. ಇದೊಂದು ಶರಣರ ಅರುಹೃದಯದಲ್ಲಾಗುವ ತವಕ. ಈ ತವಕದಿಂದ ಶರಣ ತೆರಹಿಲ್ಲದ ನುಡಿ, ತೆರಹಿಲ್ಲದ ನಡೆ, ತೆರಹಿಲ್ಲದ ವಿಶ್ರಾಮ, ಸುಖದ ಸುಖ ಸವಿಯುವದರಲ್ಲಿರಬೇ ಕೆಂಬ ಹೃದಯದ ತವಕ. ಇದು ಶರಣ ಶರಣೆಯರ ಹೃದಯದ ತವಕ, ನಿಃಶಬ್ದವೇದಿಗಳ ತವಕ, ನಿಃಶಬ್ದ ಲಿಂಗಾನುಭಾವಿಗಳ ತವಕ, ಮುಗ್ಧಾನುಭಾವಿಗಳ ತವಕ. ಈ ತವಕವೆ ಹೆಂಡತಿಯಾದುದು. ನಿಃಶಬ್ದವೇದವೆ ಪತಿಯಾದುದು. ನಿಃಶಬ್ದ ಲಿಂಗದಿರುವೆ ಪತಿಯಾದುದು. ನಿಃಶಬ್ದ ಲಿಂಗಾನುಭವದ ತವಕ ಹೆಂಡತಿಯಾದುದು. ಅರಿಯಲಿಲ್ಲದ ಅರುವೆ ಪತಿಯಾದುದು, ಅರಿಯಲಿಲ್ಲದ ಅರುವಾ ಗಿಹ ಪತಿಯ ಅರಿಯ ಹೋಗಿ ತಾನು ಅರಿಯಲಿಲ್ಲದ ಅರುವೆ ತಾನಾಗಿ ಪತಿಯಾದುದು ಸತಿಯಾ ದುದು. ಅರುವ ಅರಿಯಬಾರದ ಘನವೆ ತಾನಾಗಿ, ಅರಿಯದಂತಿದ್ದುದರಿಂದ ಶಂಭುಜಕ್ಕೇಶ್ವರ ತನ ಗಿಂತನ್ಯನಾಗದ್ದರಿಂದ ಇಂತಪ್ಪ ಅತಃಪರ ನನಗಿಂತನ್ಯನಾಗಿಹ ಗಂಡ ಅರಿವ ಅರುಹಿಸಿಕೊಂಬ ಈ ಗಂಡರ ನಾನು ಒಪ್ಪಿದೆನಾದರೆ ಕರ್ತು ನಿಮ್ಮಾಣೆಯಯ್ಯ ಶಂಭು ಜಕ್ಕೇಶ್ವರನು. ಓ ಕರ್ತು ದೇವನೇ ತೆರಹಿಲ್ಲದಭವ ನುಡಿಗೆಡೆಗೊಡದ ಮಹಾ ಕರ್ತುವೆ ನಿನ್ನನು ಅದಾರು ಬಲ್ಲರು ? ಅರುವ ಅರುಹಿ ಸಿಕೊಂಬ ನಾಮರೂಪಂಗಳ ಕರ್ತುವಾದವರುಂಟು ಅರಿವ ಕರ್ತುವಾದವರುಂಟು ಒಬ್ಬ ದೃಶ್ಯದಭಿ ಮಾನಿ ಕರ್ತುವಾಗಿಹನು. ಇನ್ನೊಬ್ಬನ ಅಭಿಮಾನಿಯಾಗಿ ಕರ್ತುವಾಗಿಹನು. ''ಕಾಯ ನಾನೆಂದರೆ ಕರ್ಮ ಕಾಂಡಿ, ಈಶಾರ್ಪಣವೆಂದರೆ ಭಕ್ತಕಾಂಡಿ.

ಸಕಲ ಕರ್ಮಗಳಿಗೆ ಸಾಕ್ಷಿ ನಾನೆಂದರೆ ಜ್ಞಾನಕಾಂಡಿ ಕಾಂಡತ್ರಯವಿಲ್ಲದ ಅಖಂಡನ ತೋರಾ ಕಪಿಲಸಿದ್ಧ ಮಲ್ಲಿಕಾರ್ಜುನಾ ದೃಶ್ಯದಭಿಮಾನಿಯಾದವನೊಬ್ಬ ಕರ್ತು, ಈಶಾರ್ಪಣ ಮಾಡುವನೊಬ್ಬ ಕರ್ತು, ಸಕಲ ಕರ್ಮಗಳಿಗೆ ಸಾಕ್ಷಿ ನಾನೆಂಬುವನೊಬ್ಬ ಕರ್ತು, ಕಾಂಡತ್ರಯವಿ ಲ್ಲದ ಅಖಂಡನು ಕರ್ತುವಾಗದ ಕರ್ತು, ನಿರ್ವಿಕಾರ ಕರ್ತು, ನಿರುಪಮ ಕರ್ತು, ನುಡಿಗಡೆಗೊಡ ದವನಾಗಿಹ ಕರ್ತು, ತೆರಹಿಲ್ಲದಭವನಾಗಿಹ ಕರ್ತು, ಏನೆಂದೆನ್ನದ ಮುನ್ನ ತಾನೆ ಆಗಿಹ ಕರ್ತು, ಆವಾವ ಕರ್ತುವಾಗದ ಕರ್ತು, ನಿರಾಲಂಬ ಕರ್ತು, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿಹ ನಿತ್ಯ ಕರ್ತು, ಅರುವಿಂಗರುವಾಗಿಹ ಮಹಾಕರ್ತು. ನಿಮ್ಮಾಣೆಯಯ್ಯ ಶಂಭುಜಕ್ಕೇಶ್ವರನು ಎಂದು ಹೇಳಿ ಹಳು. ಶಂಭುಜಕ್ಕೇಶ್ವರನೆ ಕರ್ತು ಈ ಕರ್ತುವಾಗದ ಕರ್ತು, ಕರ್ತುವೆನ್ನದ ಕರ್ತು, ಶಬ್ದಮುಗ್ಧ ಕರ್ತು, ನಿಮ್ಮಾಣೆಯಯ್ಯ ಶಂಭುಜಕ್ಕೇಶ್ವರನು.



1. ಜ್ಞಾನ 2. ದೇಹ

# ತೋರಬಾರದ ಘನದ ಆನಂದ

**ಮೊಲೆ ಮುಡಿ ಇದ್ದುದ ಹೆಣ್ಣೆಂದು ಪ್ರಮಾಣಿಸಲಿಲ್ಲ .**
**ಕಾಸೆ ಮೀಸೆ ಕಠಾರವಿದ್ದುದ ಗಂಡೆಂದು ಪ್ರಮಾಣಿಸಲಿಲ್ಲ.**
**ಅದು ಜಗದ ಹಾಹೆ ಬಲ್ಲವರ ನೀತಿಯಲ್ಲ.**
**ಏತರ ಹಣ್ಣಾದಡೂ ಮಧುರವೆ ಕಾರಣ.**
**ಅಂದವಿಲ್ಲದ ಕುಸುಮಕ್ಕೆ ವಾಸನೆಯೆ ಕಾರಣ.**
**ಇದರ ಅಂದವ ನೀನೆ ಬಲ್ಲೆ ಶಂಭುಜಕ್ಕೇಶ್ವರಾ.**

**ತಾತ್ಪರ್ಯ : ಮೊಲೆ ಮುಡಿ ಇದ್ದುದ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ ಮೀಸೆ ಕಠಾರವಿದ್ದುದಗಂಡೆಂದು ಪ್ರಮಾಣಿಸಲಿಲ್ಲ ; ಅದು ಜಗದ ಹಾಹೆ ಬಲ್ಲವರ ನೀತಿಯಲ್ಲ :** ಶರಣ, ಶರಣೆಯರ ದಿವ್ಯ ದೃಷ್ಟಿಗೂ, ಲೋಕದವರ ದೃಷ್ಟಿಗೂ ಬೆಳಕು ಕತ್ತಲೆಗಿದ್ದಷ್ಟು ವ್ಯತ್ಯಾಸ. ಶರಣ ಕಂಡುದು ಬೆಳಕಿಂಗೆ ಬೆಳಕಾದುದು. ಲೋಕದವರು ಕಂಡುದು ಕತ್ತಲೆ. ಭ್ರಾಂತಿರೂಪ ಕತ್ತಲೆ ಕಂಡರು.

ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವು ಕಂಡಂತೆ, ಲೋಕದವರು ಮರವರುವಿನಿಂದ ಕೂಡಿದ ಕತ್ತಲೆ ಅರ್ಥಾತ್ ಭ್ರಾಂತಿರೂಪ ಕತ್ತಲೆ ಕಂಡರು. ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವು ಕಂಡಂತೆ ಲೋಕದವರು ಭ್ರಾಂತರು. ಮರವರುವಿನಿಂದ ಕೂಡಿದ ನಸುಗತ್ತಲೆಯಲ್ಲಿ ತೆರಹಿಲ್ಲದ ಲಿಂಗಭರಿತ ನಲ್ಲಿ ಇಲ್ಲದ ನಾಮರೂಪವ ಕಂಡರು. ಬ್ರಹ್ಮವ ಕಾಣಲಿಲ್ಲ , ಭ್ರಾಂತಿಯ ಕಂಡರು. ಶರಣರಿಗೆ, ಲೋಕದವರಿಗೆ ಕಂಡ ನಾಮರೂಪ ಕಾಣಲಿಲ್ಲ . ಅವರು ತೋರಬಾರದ ಘನವ ಕಂಡರು, ಭ್ರಾಂತರು ಇಲ್ಲದ ನಾಮರೂಪವ ಕಂಡರು. ಮೊಲೆ ಮುಖ ಕಂಡು ಹೆಣ್ಣಾಗಿ ಕಂಡರು, ಕಾವಿ ಉಟ್ಟವನನ್ನಾಗಿ ಕಂಡರು. ವೈರಿಗಳ ಕೂಡ ಕಾದಾಡುವ ಗಡ್ಡ ಮೀಸೆಗಳುಳ್ಳವನನ್ನು ಗಂಡಾಗಿ ಕಂಡರು. ಇವರ ಕಣ್ಣು [1] ತೊಗಲ ಗೊಂಚಿಯ [1] ಕಂಡಿತು. ಇದು ಬಲ್ಲವರ ನೀತಿಯಲ್ಲ.

**ಏತರ ಹಣ್ಣಾದಡೂ ಮಧುರವೆ ಕಾರಣ :** ಹಣ್ಣು ಮುಖ್ಯವಲ್ಲ ಮಧುರವು ಮುಖ್ಯವಾದುದು. ಮಧುರಕ್ಕೆ ಬೆಲೆ ಮಾಡುವರಲ್ಲದೆ, ಹಣ್ಣಿನ ಬಣ್ಣಕ್ಕಲ್ಲ. ಮೋಸಂಬಿ ಇರಲಿ, ಸೇಬೆ ಇರಲಿ, ದ್ರಾಕ್ಷಿ ಇರಲಿ, ಬಾಳೆ ಇರಲಿ, ಬಾರಿಯದೆ ಇರಲಿ, ಆವುದೆ ಇದ್ದರೂ ಮಧುರವೆ ನೋಡುತ್ತಾರೆ. ರುಚಿ ನೋಡುತ್ತಾರೆ. ಸಿಹಿ ನೋಡುತ್ತಾರೆ. ಹಾಗೆ ಸ್ತ್ರೀಯರೆ ಇರಲಿ, ಪುರಷರೆ ಇರಲಿ, ದೇವತೆಗಳಿರಲಿ, ದೇವಗಣ, ರುದ್ರಗಣ, ಪ್ರಮಥಗಣವಿರಲಿ, ಸತ್ಯರು, ನಿತ್ಯರು, ಮುಕ್ತರೆಂಬ ಮಹಾಮಹಿಮರಿದ್ದರೂ, ತಾವಾರೆಂದು, ತಮ್ಮ ನಿಜದಿರುವು ತಿಳಿದು, ನಿಜಾನಂದದಲ್ಲಿರುವದು.

ಖಂಡಾಖಂಡ ಸಂಯೋಗವಿಲ್ಲದೆ, ಅಖಂಡಿತ ಘನ ಪೂರ್ಣವಪ್ಪ . ತನ್ನಿರುವೆ ನಿಜವೆಂದರಿದ ನಿಜಲಿಂಗೈಕ್ಯರಾಗಿ, ಅರಿಯಲಿಲ್ಲದ ಅರುವೆ ತಾವಾಗಿ, ಅರಿವ ಅರುಹಿಸಿಕೊಂಬ ಇವೆರಡು ಅರಿಯದಂತಿದ್ದಲ್ಲಿ ,ಅಂತಪ್ಪ ಶರಣರು ಶರಣೆಯರು ಆರೆ ಇರಲಿ ಅವರು ಸುಖದ ಸುಖವ ಸವಿಯುವ ಅಮೃತಾತ್ಮರು.

ಅವರು ತಪಸ್ವಿ ತ್ಯಾಗಿಗಳಿಗಿಂತಲೂ ಶ್ರೇಷ್ಠರು. ಮನು, ಮುನಿಗಳಿಗಿಂತಲೂ ಶ್ರೇಷ್ಠರು. ಅಖಿಲ ದೇವತೆಗಳಿಗಿಂತಲೂ ಶ್ರೇಷ್ಠರು ಎಂದೆನಿಸುವರು. ಏಕೆಂದರೆ ಸಕಲದರಲ್ಲಿ ತನ್ನನ್ನೆ ಕಾಣು ವನು, ತನ್ನ ಸ್ವರೂಪವಾಗಿ ಕಾಣುವನು, ತನ್ನ ಹೊರ್ತು ಅನ್ಯವ ಕಾಣದ್ದರಿಂದ ಅರಿಯಲಿಲ್ಲದ ಅರುವೆ ತಾನಾಗಿಹುದರಿಂದ ಏತರ ಹಣ್ಣಾದರೂ ಮಧುರವೆ ಕಾರಣವೆಂದಂತೆ ಆರೆ ಆಗಲಿ ತನ್ನ ಸುಖದ ಸುಖವಾಗಿಹ ಸುಖದೇಕರಸವೆ ಪ್ರಧಾನವಾಗಿಹುದು ಎಂದು ಹೇಳಿಹಳು.

ಅಂದವಿಲ್ಲದ ಕುಸುಮಕ್ಕೆ ವಾಸನೆಯೆ ಕಾರಣ ; ಕುಸುಮ ಸುಂದರವಿರದಿದ್ದರೇನಾಯಿತು ? ಅದರ ಸುವಾಸನೆಯೆ ಮುಖ್ಯವು. ಕೆಂಪು ಮಲ್ಲಿಗೆ ಹೂವು, ಜಾಜಿಮಲ್ಲಿಗೆ ನೋಡಲು ಬಹು ಸುಂದರ ಕಾಣಿಸುತ್ತವೆ. ಆದರೆ ಅದರಲ್ಲಿ ಸುವಾಸನೆ ಇಲ್ಲ .

ಕವಳಿ ಗಿಡವೂ ನೋಡಲು ಅಂದವಲ್ಲ ಕಾಯಿಯು ಹುಳಿಯಾಗಿರುತ್ತದೆ. ಹೂವು ಮಾತ್ರ ಘಮಘಮಿಸುತ್ತದೆ . ಎಲ್ಲಿದ್ದರೂ ವಾಯು ಮೂಲಕ ತನ್ನ ಸುವಾಸನೆಯ ಪರಿಚಯ ಮಾಡುತ್ತದೆ. ಹಾಗೆ ಸುರಾಸುರರು ಪರಾಕ್ರಮ ಶಾಲಿಗಳು. ತಪಸ್ಸು ಮಾಡುವದರಲ್ಲಿ ಪ್ರಧಾನರು. ಮನು, ಮು ನಿಗಳು ಇವರುಗಳೆಲ್ಲ ಕಾಯಾ, ವಾಚಾ, ಮನದಿಂದಲೂ ವೈರಾಗ್ಯಶಾಲಿಗಳು, ಉಪಾಸಕರಲ್ಲಿ ಶ್ರೇಷ್ಠರು. ದೇವತೆಗಳ ಒಲಿಸಿಕೊಂಡು ವರ ಪಡೆಯುವದರಲ್ಲಿ ಶ್ರೇಷ್ಠರು. ಯಜ್ಞಾದಿಗಳ ಮಾಡು ವಲ್ಲಿ ಫಲವಂತರು. ಹಿಡಿದುದು ಬಿಡುವರಲ್ಲ . ಆದರೂ ಶಬ್ದ ನಷ್ಟ ಮಾಡದವರು. ಮನ ನಷ್ಟ ಮಾಡದವರು. ಇದು ಕಾರಣ, ನಿಶಬ್ದ ವೇದಿಗಳಾಗದಿದ್ದಲ್ಲಿ ಮನ ಘನವಾಗದಿದ್ದಲ್ಲಿ ತಮ್ಮ ನಿಜದಿ ರುವ ತಿಳಿಯದಿದ್ದಲ್ಲಿ ನಿಷ್ಪ್ರಯೋಜಕವು ಎಂದು ತಿಳಿಯುವದು.

**ಇದರ ಅಂದವ ನೀನೆ ಬಲ್ಲೆ ಶಂಭುಜಕ್ಕೇಶ್ವರ :** ಹೆಣ್ಣೆ ಆಗಲಿ, ಗಂಡೆ ಆಗಲಿ, ಇದರ ಅಂದವ ಬಲ್ಲವರು ಪ್ರಮಾಣಿಸಲಿಲ್ಲ, ಬಲ್ಲವರ ದೃಷ್ಠಿ ಗಂಡು ಹೆಣ್ಣೆಂಬುದು ಹುಸಿ. ಮೊಲದ ಕೋಡು ಹುಸಿ, ಬಂಜೆಯ ಮಗ ಹುಸಿ, ಗಗನ ಕುಸಮ ಹುಸಿ, ಬಂಗಾರದಲ್ಲಿ ತೋರುವ ಆಭರಣ ಹುಸಿ. ಮೊಲಕ್ಕೆ ಕೋಡು ಇಲ್ಲವೆಂದಲ್ಲಿ ಅದರ ಅಂದವೂ ಇಲ್ಲ , ಕೋಡು ಹುಟ್ಟಿದುದು ಹುಸಿ, ಇದ್ದುದು ಹುಸಿ, ಸತ್ತದು ಹುಸಿ. ಹಾಗೆ ಗಂಡು ಹೆಣ್ಣೆಂಬುದು ಹುಸಿಯಾದುದರಿಂದ ಆದುದನರಿಯೇ, ಹೋದುದನರಿಯೇ ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪ ಹುಸಿ ಯಾಗಿರುವಲ್ಲಿ ಇದರ ಅಂದವು ನೀನೆ ಬಲ್ಲೆ ಬಂಗಾರದಲ್ಲಿ ಆಭರಣ ಹುಸಿ ಆಭರಣದ ಅಂದವೂ ಹುಸಿಯಾದುದರಿಂದ ಬಂಗಾರ ಬಂಗಾರವೇ. ಹಾಗೆ ತೋರಬಾರದ ಘನದಲ್ಲಿ , ತೋರುವ ಅಖಿಲ ಪ್ರಪಂಚ, ತೋರಬಾರದ ಘನವು ಹೇಳುವದದೆಂತು ? ಹೇಳಬಾರದಿದ್ದಲ್ಲಿ ತೋರುವದದೆಂತು ? ಇದು ಕಾರಣ ತೋರಬಾರದ ಘನದ ಅಂದವ ನೀನೆ ಬಲ್ಲೆ ಎಂದು ಹೇಳಿಹಳು.

□

1. ವಿಷಯ

# ಸುಖದ ಸುಖವಾಗಿಹ ಸ್ವಯ ಭಾಷೆ

**ಲಂಚ ವಂಚನಕ್ಕೆ ಕೈಯಾನದ ಭಾಷೆ !**
**ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ**
**ಕೈಮುಟ್ಟಿ ಎತ್ತಿದೆನಾದೊಡೆ, ಅಯ್ಯಾ ನಿಮ್ಮಾಣೆ !**
**ನೀವಿಕ್ಕಿದ ಭಾಷೆಯೊಳಗಿಪ್ಪೆನಯ್ಯ**
**ಶಂಭು ಜಕ್ಕೇಶ್ವರ ದೇವಯ್ಯ ! ನಿಮ್ಮಾಣೆ.**

**ತಾತ್ಪರ್ಯ: ಲಂಚ ವಂಚನಕ್ಕೆ ಕೈಯಾನದ ಭಾಷೆ ! :** ಶರಣರ ಭಾಷೆ, ವಿಶ್ವಾಸದ ಭಾಷೆ, ಗುರು, ಲಿಂಗ, ಜಂಗಮ ಒಂದೆಂಬ ಭಾಷೆ . ನಿರ್ವಂಚನೆಯೆ ವೈರಾಗ್ಯವಾಗಿಹ ಭಾಷೆ .

ಇದು ಸತ್ಯ, ಶಿವ ಬಲ್ಲನೆಂಬ ಭಾಷೆ . ಶರಣರ ಭಾಷೆ . ಅರಿವ ಅರುಹಿಸಿಕೊಂಬ, ಇವೆರಡು ನಷ್ಟಮಾಡಿ ಅರಿಯಬಾರದ ಘನವರಿತು ಅರಿಯದಂತಿದ್ದು ಎಲ್ಲೆಲ್ಲೂ ಅರಿಯಬಾರದ ಘನವ ಕಂಡುದು. ಅರಿಯಬಾರದ ಘನ ಹೊರ್ತಾಗಿ, ಮತ್ತೊಂದನರಿ ಯದ್ದರಿಂದ ಅಲ್ಲಿ ವಂಚನೆಗೆ ಇಂಬಿಲ್ಲ .

ವಂಚಕ ಹೃದಯವೆ ನಷ್ಟವಾದುದರಿಂದ ಅರುಹಿಸಿಕೊಂಬ ನಾಮರೂಪ ಕಾಣರು. ಅರಿವ ಸಾಕ್ಷಿ ದೃಕ್ಕೆಂಬುದು ಕಾಣರು. ಇವೆರಡು ಕಾಣದ್ದರಿಂದ ಪ್ರಮಾಣದ ದೃಷ್ಠಿ ಇಲ್ಲ, ಪ್ರಮಾಣ ದೃಷ್ಠಿ ಇಲ್ಲದ ನಾಮರೂಪ ಕಂಡುದರಿಂದ ವಂಚಕ ದೃಷ್ಠಿ ಅಪ್ರಮಾಣದಲ್ಲಿ ಪ್ರಮಾಣವ ಕಂಡುದು ದೋಷ, ದೋಷ ದೃಷ್ಠಿ, ದೋಷಭಾವ, ದೋಷ ಜ್ಞಾನ ತಮ್ಮ ಅಂತರಂಗದಲ್ಲಿ ಕಂಡುದು ಲಂಚ ವಂಚನಕ್ಕೆ ಒಪ್ಪಿದುದು. ಇದು ಶರಣರ ಭಾಷೆಯಾಗದು.

ಇದಲ್ಲದೆ ಗುರು, ಲಿಂಗ, ಜಂಗಮಕ್ಕೆ ವಂಚಕವಾದುದು. ''ತನು, ಮನ, ಧನ ಗುರುವಿಂಗೆ ಕೊಟ್ಟೆನೆಂಬುದು ವಂಚನೆ. ತನುವ ಕೊಡುವುಡೆ ಗುರುವಿನದದು ಮನವ ಕೊಡುವುಡೆ ಲಿಂಗದದು ಧನವ ಕೊಡುವುಡೆ ಜಂಗಮದದು ಅವರ ಪದಾರ್ಥ ಅವರಿಗೆ ಕೊಟ್ಟು ಭಕ್ತನಾದೆನೆಂಬುದು ಅರುಹಿನ ಕೇಡು. ಹಿರಿಯತನದ ಕೇಡು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ''

ನಿರ್ವಂಚಕನ ಹೃದಯ ಸಿಕ್ಕುವದು ಕರಕಷ್ಟ, ಎಲ್ಲಿ ನೋಡಿದಡಲ್ಲಿ ವಂಚಕದೃಷ್ಠಿ , ವಂಚಕ ಮಾತು, ವಂಚಕ ಭಾವ, ವಂಚಕ ಜ್ಞಾನ, ಇದುವೆ ಸಕಲ ಹೃದಯದಲ್ಲಿ ಭರಿತವಾಗಿ ಭ್ರಮಾತ್ಮಕ ಜ್ಞಾನವೆ ಬ್ರಹ್ಮರೂಪವಾಗಿದೆ ಎಂದಲ್ಲಿ ತತ್ವವು ಅದಾರಿಗೆ ಘನವಾಗಬೇಕು. ಆದಲ್ಲಿ ಶರಣ ಶರಣೆಯರ ಹೃದಯವಾಗಿದೆ ಅಲ್ಲಿ ವಂಚನಕ್ಕೆ ಅವಕಾಶವಿಲ್ಲ,

ಅದು ಅರುವಿಂಗರುವಾಗಿಹ ಅರುಹೃದಯ. ''ಅರುಹೃದಯ ಕಣ್ತೆರೆಯಬೇಕೆಂದು ಗುರುವೆಂದು ಕಲ್ಪಿಸಿಕೊಂಡೆನಲ್ಲದೆ. ಗುರುವಿಂಗೆ ಶಿಷ್ಯನೆಂಬುದುಂಟೆ? ಶಿಷ್ಯಂಗೆ ಗುರುವೆಂಬುದುಂಟೆ? ಗಮನಾಗಮನ ನಾಸ್ತಿಯಾದ ಲಿಂಗಕ್ಕೆ ಅಂಗವೆಲ್ಲಿಯದು ಗುಹೇಶ್ವರಾ''

ಅರು ಹೃದಯದಲ್ಲಿ ಮರುವಿಂಗೆ ಅವಕಾಶ ಕೊಡದ್ದರಿಂದ ಲಂಚ ವಂಚನಕ್ಕೆ ಕೈಯಾನದ ಭಾಷೆ ಎಂದು ಹೇಳಿಹಳು.

ಗುರುವಿಂಗೆ ಶಿಷ್ಯನೆಂಬುದುಂಟೆ ? ಶಿಷ್ಯಂಗೆ ಗುರುವೆಂಬುದುಂಟೆ? ಈರ್ವರಲ್ಲಿ ಪ್ರತಿಭಾವವೆಂಬ ವಂಚಕ ತನವೆ ನಷ್ಟವಾಗಿದೆ. ಗುರುವಾದವರಲ್ಲ, ಶಿಷ್ಯರಾದವರಲ್ಲ, ಏನೊಂದಾಗದವರು. ಇಂದು, ಅಂದು, ಎಂದೆಂದೂ ಇದ್ದಂತಿರುವ ನಿರಂತರರು. ಅಪ್ರತಿಮ ಅಗಮ್ಯರು. ಅರಿಯಲಿಲ್ಲದ ಅರುವರಿತು ಅದುವೆ ತಾವಾದವರಾದುದಕ್ಕಾಗಿ ಲಂಚ ವಂಚನಕ್ಕೆ ಕೈಯಾನದ ಭಾಷೆ ಎಂದು ಹೇಳಿಹರು.

**ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ ನಿಮ್ಮಾಣೆ :** ಬಟ್ಟೆ ಇದಾವ ಬಟ್ಟೆ ಗುರು ಕಾರುಣ್ಯದ ಬಟ್ಟೆ. ಗುರು ಲಿಂಗ ಜಂಗಮ ಒಂದೆಯಾಗಿ ಕಾಣುವ ಬಟ್ಟೆ. ತನುವೆ ಗುರು, ಮನವೆ ಲಿಂಗ, ಧನವೆ ಜಂಗಮವೆಂಬ ಬಟ್ಟೆ. ಇದು ತನುವಿಂಗೆ ತನುವಾದ ಬಟ್ಟೆ. ಮನಕ್ಕೆ ಮನವಾದ ಬಟ್ಟೆ ಜೀವಕ್ಕೆ ಜೀವವಾದ ಬಟ್ಟೆ . ಇಂತಪ್ಪ ಅರುವಿಂಗೆ ಅರುವಾದ ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಡೆ ಕೈಮುಟ್ಟಿ ಎತ್ತಿದೆನಾದಡೆ ನಿಮ್ಮಾಣೆಯಯ್ಯ.

ಅರುವಿಂಗರುವಾದ ಬಟ್ಟೆ ಅಖಂಡ ಬಟ್ಟೆ . ಅಚಲಿತ ಬಟ್ಟೆ . ನಿರುಪಮ ಲಿಂಗಯ್ಯನ ಬಟ್ಟೆ. ಈ ಬಟ್ಟೆಯಲ್ಲಿ ಅರಿವ ಅರುಹಿಸಿಕೊಂಬ ಉಭಯದ ಜ್ಞಾನವೆ ಹೊನ್ನು. ಈ ಉಭಯ ಭಾವವೆ ವಸ್ತ್ರ ಉಭಯ ಜ್ಞಾನ ಭಾವನ ಒಪ್ಪಿಕೊಂಡು ಅಪ್ಪಿದುದೆ ಅದನ್ನು ಕೈ ಮುಟ್ಟಿ ಎತ್ತಿದಂತೆ ಎಂದು ತಿಳಿಯುವದು.ಇದು ಾರಣ ಅರಿಯಲಿಲ್ಲದ ಅರುವುಅರಿತ ಮೇಲೆ ಅರಿವ ಅರುಹಿಸಿಕೊಂಬುದಕ್ಕೆ ಒಪ್ಪಿದಲ್ಲಿ ನಿಮ್ಮಾಣೆಯಯ್ಯ ಅದಕ್ಕೆ ಒಪ್ಪಲಾರೆ ಎಂದು ಹೇಳಿಹರು.

**ನೀವಿಕ್ಕಿದ ಭಾಷೆಯೊಳಗಿಪ್ಪೆನಯ್ಯ ಶಂಭುಜಕ್ಕೇಶ್ವರ :** ದೇವರ ದೇವಯ್ಯ, ನೀವಿಕ್ಕಿದ ಭಾಷೆ ಸುಖದ ಸುಖವಾಗಿಹ ಸ್ವಯಭಾಷೆ. ಏನೆಂದೆನ್ನದ ಮುನ್ನ ತಾನೆಯಾದ ಭಾಷೆ .

ದೇಹಿಗೆ ದೇಹಿಯಾದ ಭಾಷೆ, ತೆರಹಿಲ್ಲದಭವನ ಭಾಷೆ ನುಡಿಗೆಡೆಗೊಡದವನ ಭಾಷೆ, ನಿರ್ನಾಮಿಯ ಭಾಷೆ, ನಿರೂಪ ಭಾಷೆ, ನಿರಾಳಭಾಷೆ, ನಿರಾಲಂಬ ಭಾಷೆ, ನೀವಿಕ್ಕಿದ ಭಾಷೆ, ನಿಶಬ್ದ ವೇದಿಯ ಭಾಷೆ, ಮಾತಿಲ್ಲದವನ ಭಾಷೆ, ನಿಮ್ಮ ಭಾಷೆಯೊಳಗಿಪ್ಪೆನಯ್ಯ ಶಂಭುಜಕ್ಕೇಶ್ವರ ದೇವಯ್ಯ. ನಿಮ್ಮವರ ಪ್ರತಿಜ್ಞಾ ವಾಕ್ಯ ನಿಮ್ಮ ಸಹಜ ಭಾಷೆ , ಸಹಜ ವಾಕ್ಯ ಇದಕ್ಕೆ ಪ್ರತಿಜ್ಞೆವೇಕೆ? ನನ್ನ ಸ್ವಯ ಭಾಷೆಯಲ್ಲಿ ನಾನಿಪ್ಪೆನಯ್ಯ ಗುರುವಿಂಗೆ ಗುರುವಾಗಿಹ ಗುರುಲಿಂಗ ಭಾಷೆ ಲಿಂಗಕ್ಕೆ ಲಿಂಗವಾಗಿಹ ಸ್ವಯ ಲಿಂಗಭಾಷೆ ಜಂಗಮಕ್ಕೆ ಜಂಗಮವಾದ ನಿರ್ಲಿಖಿತ ಜಂಗಮ ಭಾಷೆ. ಈ ಮಹಾಭಾಷೆ ಅದು ಶಂಭುಜಕ್ಕೇಶ್ವರ ದೇವಯ್ಯ ನಿಮ್ಮಾಣೆಯಯ್ಯ ಎಂದು ಹೇಳಿಹಳು.



# ಭ್ರಮಾರೂಪ ಸತಿಯನಿತ್ತು ಶರಣಸತಿಯ ನಂಬಿದವರು

**ವಿಶ್ವಾಸದಿಂದ ನಂಬಿದರಯ್ಯಾ ಬಿಲ್ಲಮರಾಯನವರು.**
**ವಿಶ್ವಾಸದಿಂದ ನಂಬಿದರಯ್ಯಾ ಗೊಲ್ಲಾಳರಾಯನವರು.**
**ವಿಶ್ವಾಸದಿಂದ ನಂಬಿದರಯ್ಯಾ ಕೆಂಭಾವಿಯ ಭೋಗಣ್ಣನವರು.**
**ವಿಶ್ವಾಸದಿಂದ ನಂಬಿದರಯ್ಯಾ ಬಳ್ಳೇಶ್ವರ ಮಲ್ಲಯ್ಯಗಳು.**
**ವಿಶ್ವಾಸದಿಂದ ನಂಬಿದರಯ್ಯಾ ಸಾಮವೇದಿಗಳು.**
**ವಿಶ್ವಾಸದಿಂದ ನಂಬಿದರಯ್ಯಾ ದಾಸ ದುಗ್ಗಳೆಯವರು.**
**ವಿಶ್ವಾಸದಿಂದ ನಂಬಿದರಯ್ಯಾ ಸಿರಿಯಾಳ ಚಂಗಳೆಯವರು.**
**ವಿಶ್ವಾಸದಿಂದ ನಂಬಿದರಯ್ಯಾ ಸಿಂಧು ಬಲ್ಲಾಳನವರು.**
**ವಿಶ್ವಾಸದಿಂದ ನಂಬಿದರಯ್ಯಾ ಬಿಬ್ಬಿ ಬಾಚಯ್ಯಗಳು**
**ವಿಶ್ವಾಸದಿಂದ ನಂಬಿದರಯ್ಯಾ ಮರುಳಶಂಕರದೇವರು.**
**ಇಂತಪ್ಪ ವಿಶ್ವಾಸಿಗಳ ಶ್ರೀಪಾದಕ್ಕೆ ನಮೋ ನಮೋ ಎನುತ್ತಿದ್ದೆನಯ್ಯ ಶಂಭುಜಕ್ಕೇಶ್ವರ.**

**ತಾತ್ಪರ್ಯ: ವಿಶ್ವಾಸದಿಂದ ನಂಬಿದರಯ್ಯಾ ಬಿಲ್ಲಮರಾಯನವರು:**
ಬಿಲ್ಲಮರಾಯನೆಂಬ ಶರಣ ಭರವಸೆಯಿಂದ ನಂಬಿದರಯ್ಯ. ಅನುಮಾನ ಮಾಡದೆ ನಂಬಿದರಯ್ಯ. ಬಿಲ್ಲಮರಾಯರು ಅಪಾರ ವಿಶ್ವಾಸದಿಂದ ನಂಬಿದರಯ್ಯ. ನಿರ್ವಂಚಕರಾಗಿ ನಂಬಿದರಯ್ಯ ಬಿಲ್ಲಮರಾಯ. ಯಾರನ್ನು ವಿಶ್ವಾಸದಿಂದ ನಂಬಿದರಯ್ಯ? ಇಬ್ಬರ ಮಧ್ಯೆದಲ್ಲಿ ಒಂದು ವಸ್ತು ಉಂಟು. ಗುರುವಿನ ಗುರು ಬೇಗಲರಿಯಿರೆ ಗುಹೇಶ್ವರನ. ಇಬ್ಬರ ಮಧ್ಯದಲ್ಲಿದ್ದ ವಸ್ತು ಅದು ಒಂದೆ. ಅಂಥಹ ಪರಾತ್ಪರ ವಸ್ತುವ ವಿಶ್ವಾಸದಿಂದ ನಂಬಿದರಯ್ಯ. ಗುರುವಿಂಗೆ ಗುರುವಾಗಿಹ ಗುರುಲಿಂಗವ ವಿಶ್ವಾಸದಿಂದ ನಂಬಿದರಯ್ಯ. ''ಅರಿದೆವರಿದೆವೆಂಬಿರಿ ಅರಿದ ಪರಿ ಎಂತೋ ? ಅರಿದವರು ಅರಿದೆವೆಂಬರೆ ಅರಿಯ ಬಾರದ ಘನವರಿತು ಅರಿಯದಂತಿಪ್ಪರು ಗುಹೇಶ್ವರಾ''.

ಅರಿಯಬಾರದ ಘನವ ವಿಶ್ವಾಸದಿಂದ ನಂಬಿದರಯ್ಯ ಬಿಲ್ಲಮರಾಯರು. ಅರಿಯಬಾರದ ಘನವದು ಅರಿಯಲಿಲ್ಲದ ಅರುವ, ಈ ಮಹದರುವ ಅರಿತು, ಅರಿಯಲಿಲ್ಲ ಮರೆಯಲಿಲ್ಲ, ''ನಿಜವು ನಿಂದಿತ್ತಾಗಿ ನಿರ್ನಾಮವಾಯಿತ್ತಾಗಿ ನಿಷ್ಪತ್ತಿಯಾಯಿತ್ತು. ಅಗಮ್ಯದಲ್ಲಿ ಗಮನಗೆಟ್ಟಿತ್ತು, ನಿಂದಲ್ಲಿ ನಿರಾಳ ವಾಯಿತ್ತು ಕೂಡಲ ಸಂಗಮದೇವರಲ್ಲಿ ಶಬ್ದಮುಗ್ದವಾಯಿತ್ತು.''

ಬಿಲ್ಲಮರಾಯನು ವಿಶ್ವಾಸದಿಂದ ನಂಬಿದನಯ್ಯ ಬಸವಣ್ಣನೆಂಬ ಗುರುಲಿಂಗವ. ಇದು ಅರಿಯ ಬಾರದ ಘನವದು. ಅರಿದಿಹೆನೆಂದರೆ ಅರುವಿಂಗಸಾಧ್ಯವಾದುದು. ವಿಶ್ವಾಸದಿಂದ ನಂಬಿದರಯ್ಯ. ಗೊಲ್ಲಾಳರಾಯರು. ಭಾವಿಸಿಹೆನೆಂದಡೆ ಭಾವಕ್ಕಸಾಧ್ಯವಾದುದು. ವಿಶ್ವಾಸದಿಂದ ನಂಬಿದರಯ್ಯ ಕೆಂಭಾವಿ ಭೋಗಣ್ಣನವರು. ವಾಙ್ಮನಕ್ಕಗೋಚರ ಲಿಂಗ, ವಿಶ್ವಾಸದಿಂದ ನಂಬಿದರಯ್ಯ. ಗುರು ತೋರಿದ ತೆರದಂತೆ ತೋರಬಾರದ ಘನವ ತೋರಿದನಯ್ಯ ಅದು ಹೇಳಬಾರದ ಘನವದು ತೋರಲೆಂದೇನೋ ಇಂತಪ್ಪ ಸಕಲರ ಅಂತರಂಗದಲ್ಲಿ ನ್ಯಸ್ತವಾಗಿಹ ಸ್ವಯಂ ಜ್ಯೋತಿರ್ಲಿಂಗವ ವಿಶ್ವಾಸದಿಂದ ನಂಬಿದರಯ್ಯ . ವೇದ ವೇದಾಂತ

ಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ವಿಶ್ವಾಸದಿಂದ ನಂಬಿದರಯ್ಯ ಸಾಮವೇದಿಗಳು . ಇದು ಓದಿದ ವೇದದಲ್ಲೇನಹುದು ? ಓದಿಸಬಾರದಂಥ ಲಿಂಗಸ್ಥಲ. ಲಿಂಗಕ್ಕೆ ಲಿಂಗವಾಗಿಹ ತನ್ನ ಅಂತರಂಗದ ಲ್ಲಿದ್ದ ಸ್ವಯ ಲಿಂಗವ ವಿಶ್ವಾಸದಿಂದ ನಂಬಿದರಯ್ಯ ದಾಸದುಗ್ಗಳೆಯರು.

ವಿಶ್ವಾಸದಿಂದ ನಂಬಿದರಯ್ಯ ನಿರ್ಮಾಯ ಜಂಗಮಲಿಂಗವ, ನಿರುಪಾಧಿ ಜಂಗಮಲಿಂಗವ, ದೇವರ ದೇವ ನೀನೆಂದೆನಿಸಿದವನ ವಿಶ್ವಾಸದಿಂದ ನಂಬಿದರಯ್ಯ ದಾಸ ದುಗ್ಗಳೆಯರು. ನಿತ್ಯ ತೃಪ್ತನೆಂದೆನಿಸಿದವನ ವಿಶವಾಸದಿಂದ ನಂಬಿದರಯ್ಯ. ಸಿರಿಯಾಳ ಚಂಗಳೆಯರ ಮಗನ ಬೇಡಿದನೆ ? ಮಗನ ಕೊಟ್ಟರೆ ? ಮಗುವ ಕೊಂದು ಅಡಿಗೆಯ ಮಾಡಿದುದು ವಿಶ್ವಾಸದಿಂದ ನಂಬಿದರಯ್ಯ, ನಿತ್ಯ ತೃಪ್ತನೆಂದೆನಿಸಿದ ಜಂಗಮ ಲಿಂಗವ. ಪುನಃ ಊಟಕ್ಕೆ ಬಾ ಮಗು ಎಂದು ಕರೆಯಲೊಡನೆ ಮಗು ಬಂದು ನಿತ್ಯ ತೃಪ್ತನಾಗಿಹ ಜಂಗಮ ದೇವನ ಜೋಡಿಯಲಿ ಊಟ ಮಾಡಿದುದು. ಇಂತಪ್ಪ ಮಾಯಿಕ ಜಂಗಮನನೇನೆಂಬೆನೆ ? ನಿರ್ಮಾಯ ಜಂಗಮ, ಶಿವೈಕ್ಯ ಜಂಗಮ, ಸ್ವಯಂ ಜ್ಯೋತಿಯಾಗಿಹ ಘನ ಜಂಗಮನ ವಿಶ್ವಾಸದಿಂದ ನಂಬಿದರಯ್ಯ ಸಿರಿಯಾಳ ಚಂಗಳೆಯರು.

**ವಿಶ್ವಾಸದಿಂದ ನಂಬಿದರಯ್ಯ ಹೆಂಡತಿಯ ಕೇಳಿದವನ , ವಿಶ್ವಾಸದಿಂದ ನಂಬಿದರಯ್ಯ ಸಿಂದು ಬಲ್ಲಾಳನವರು :** ಭ್ರಮರೂಪ ಸತಿಯಕೊಟ್ಟು, ಶರಣ ಸತಿಯ ಕಂಡರು. ''ಸತಿಯ ಕಂಡು ವ್ರತಿಯಾದ ಬಸವಣ್ಣ. ವ್ರತಿಯಾಗಿ ಬ್ರಹ್ಮಾಚಾರಿಯಾದ ಬಸವಣ್ಣ. ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಗುಹೇಶ್ವರ ನಿಮ್ಮಲ್ಲಿ. ಬಾಲ ಬ್ರಹ್ಮಾಚಾರಿಯಾದಾತ ಸಂಗನ ಬಸವಣ್ಣನಲ್ಲದೆ ಮತ್ತಾರು ಇಲ್ಲವಯ್ಯ''. ಇಂತಪ್ಪ ಮಹಾಂತನ ವಿಶ್ವಾಸದಿಂದ ನಂಬಿದರಯ್ಯ ಬಿಬ್ಬಿ ಬಾಚಯ್ಯಗಳು : ಬಿಬ್ಬಿ ಬಾಚಯ್ಯಗಳು ಪ್ರಸಾದಕ್ಕೆ ಪ್ರಸಾದವಾಗಿಹ ಅವಿನಾಶಿ ಪ್ರಸಾದವ ವಿಶ್ವಾಸದಿಂದ ನಂಬಿದರಯ್ಯ ಎಂದು ಹೇಳಿಹಳು.

ವಿಶ್ವಾಸದಿಂದ ನಂಬಿದರಯ್ಯ ಮರುಳ ಶಂಕರದೇವರುಗಳು : ಮರುಳ ಶಂಕರದೇವಯ್ಯ. ಅನುಭಾವದಗಮ್ಯವ ವಿಶ್ವಾಸದಿಂದ ನಂಬಿದರಯ್ಯ, ಅರುವಿನ ವಿಶ್ರಾಮವ ವಿಶ್ವಾಸದಿಂದ ನಂಬಿದರಯ್ಯ, ನಿಜದ ನಿಲವ ವಿಶ್ವಾಸದಿಂದ ನಂಬಿದರಯ್ಯ. ಭಾವಕ್ಕಗಮ್ಯವಾದುದ. ವಿಶ್ವಾಸದಿಂದ ನಂಬಿದರಯ್ಯ. ಅವಿನಾಶ ಪ್ರಸಾದ ವಿಶ್ವಾಸದಿಂದ ನಂಬಿದರಯ್ಯ ಮರುಳಶಂಕರ ದೇವರು. ವಿಶ್ವಾಸದಿಂದ ನಂಬಿದರಯ್ಯ. ಮನದೊಡೆಯನನ್ನು ಸಾವಯವ ನಿರವಯ ತನ್ನೊಳಡಗಿಸಿಕೊಂಡ ಪರಮಗುರುವ ವಿಶ್ವಾಸದಿಂದ ನಂಬಿದರಯ್ಯ ಎಂದು ಹೇಳಿಹಳು.

ಗುರುವಾದುದು ತಪ್ಪು . ಲಿಂಗವಾದುದು ತಪ್ಪು . ಜಂಗಮವಾದುದು ತಪ್ಪು . ಪ್ರಸಾದವಾದುದು ತಪ್ಪು . ಇಂತೀ ಚತುರ್ವಿಧಕ್ಕೆ ಚತುರ್ವಿಧವಾಗಿ ಕೊಳಬಲ್ಲ ಪರಮ ಗುರುವ ವಿಶ್ವಾಸದಿಂದ ನಂಬಿದರಯ್ಯ . ಮಾತಿಲ್ಲದವನ ಕೂಡ ಮಾತನಾಡ ಹೋಗಿ ಮಾತೆ ನಿಷ್ಪ್ರಯೋಜಕವಾಗಿ ಮಾತಿನ ಹಂಗು ಹರಿದು ಪರವಶವಾಗಿಪ್ಪ ಸ್ವಯಲಿಂಗಿಗಳ ವಿಶ್ವಾಸದಿಂದ ನಂಬಿದರಯ್ಯ ಶರಣ ಶರಣೆಯರು ಎಂದು ಹೇಳಿಹಳು.

ಇಂತಪ್ಪ ವಿಶ್ವಾಸಿಗಳು ವಿಶ್ವಾಸದಿಂದ ನಂಬಿದ ಘನದಿರುವ ನೋಡಾ . ತುದಿ ಮೊದಲಿಲ್ಲದ ಘನ ವಿಶ್ವಾಸದಿಂದ ನಂಬಿದರಯ್ಯ . ಒಳಹೊರಗೆಂಬುದಿಲ್ಲದ ಅನುವ ವಿಶ್ವಾಸದಿಂದ ನಂಬಿದರಯ್ಯ. ಗುರು, ಲಿಂಗ, ಜಂಗಮ ತಾನೆಯಾಗಿ ಮತ್ತೆ ತಾನೆಂಬುದೇನು ಇಲ್ಲದ, ಮಹದಿರುವ ವಿಶ್ವಾಸದಿಂದ ನಂಬಿದರಯ್ಯ. ತನ್ನ ತಾ ನಿರ್ದೆಶೆಯ ಮಾಡಿಕೊಂಡ ನಿಜಪದವನೆಯ್ದಿಪ್ಪ ಮಹವ ವಿಶ್ವಾಸದಿಂದ

ನಂಬಿದರಯ್ಯ. ಇದು ಮಾಡಬಾರದ ವಿಶ್ವಾಸ ಮಾಡಿದುದು. ನಂಬದುದ ನಂಬಿದುದು. ನೋಡಬಾರದುದ ನೋಡಿದುದು ಕೂಡಬಾರದ ಕೂಟವನೆ ಕೂಡಿ ಸ್ತುತಿಸುವವರಿಗೆ ಸ್ತುತಿಗೆ ಬಾರದ. ಮುಟ್ಟುವರಿಗೆ , ಮುಟ್ಟಬಾರದ, ಬಟ್ಟಬಯಲಾಗಿ ಹೋದ ಮರುಳ ಶಂಕರ ದೇವರುಗಳು. ಇಂತಪ್ಪ ವಿಶ್ವಾಸಿಗಳಾಗಿಹ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನಯ್ಯ ಶಂಭುಜಕ್ಕೇಶ್ವರಾ. ಇವರು ನಿಃಶಬ್ದವೇದದ ವಿಶ್ವಾಸಿಕರು. ನಿಃಶಬ್ದ ಲಿಂಗಾನುಭವಿಗಳ ವಿಶ್ವಾಸಿಗಳಾಗಿದ್ದುದರಿಂದ ಇವರುಗಳ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ಎಂದು ಹೇಳಿಹಳು.



# ಮರೆತು ಮಾತನಾಡಿದರೆ ಅರಿತು ಎಚ್ಚರಿಸುವ ಅಂತರಂಗದ ಜ್ಞಾನ

**ಹೊರಗಿದ್ದಹನೆಂದು ನಾನು ಮರೆದು ಮಾತನಾಡಿದೆ;**
**ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು.**
**ತೆರಹಿಲ್ಲದಭವ ನುಡಿಗೆಡೆಗೊಡನು;**
**ಆತನ ಬಯಲಿಂಗೆ ಬೇಟೆಗೊಂಡೆನವ್ವಾ.**
**ನಾನೇನ ಮಾಡುವೆನೆಲೆ ತಾಯೆ.**
**ಮರೆದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು.**
**ತನ್ನನರಿದಡೆ ಒಳ್ಳಿದನವ್ವಾ ನಮ್ಮ ಶಂಭುಜಕ್ಕೇಶ್ವರನು.**

**ತಾತ್ಪರ್ಯ: ಹೊರಗಿದ್ದಹನೆಂದು ನಾನು ಮರೆದು ಮಾತನಾಡಿದೆ ಅರಿಯಲೀಯದೆ ಬಂದನ್ನೆ ಅಂತರಂಗ ದಲ್ಲಿಪ್ಪನು :**
ಪೂರ್ವ ಕಾಲದಿಂದಲೂ ದೇವನನ್ನು ಹೊರಗಿದ್ದಹನೆಂದು, ಮರೆದು ಮಾತನಾಡಿದವರೆ ಬಹು ಭಕ್ತರು ಸಿಕ್ಕುವರು. ನರರು ದೇವರು ಹೊರಗಿದ್ದಹನೆಂದು ಅವನ ಕಾಣಲು ಅವನ ನಾಮವ ಜಪಿಸಿದರು. ಧ್ಯಾನ ಧಾರಣಾದಿಗಳ ಮಾಡಿದವರು ಸಿಕ್ಕುವರು. ದೇವತೆಗಳು ಕೂಡ ದೇವನು ಹೊರಗಿದ್ದವನೆಂದು ತಿಳಿದು ಅವನ ಬರಮಾಡಿಕೊಳ್ಳಲು ಉಗ್ರ ತಪವ ಮಾಡಿದರು. ಇತ್ತ ಬ್ರಹ್ಮಾದಿಗಳು ಕೂಡ ದೇವನ ಒಲಿಸಲು ಧ್ಯಾನ ಸಮಾಧಿಗಳ ಆಚರಿಸಿದರು. ಇವರುಗಳು ಕೂಡ ಮಾಯಿಕದೇವ ತೋರಿ ಅದೃಶ್ಯವಾಗುವ ದೇವನ ಕಂಡು ದೇವನ ದರ್ಶನವೆಂದುಕೊಂಡರಲ್ಲದೆ ಶರಣ ಶರಣೆಯರಂತೆ ದೇವನ ಯತಾರ್ಥ ತಿಳಿಯ ಹೋಗಿ ದೇವನೆ ಆದರು ಎಂದು ಹೇಳಲಿಲ್ಲ ತಾನೆ ದೇವನೆನಲಿಲ್ಲ.

ಇದು ಕಂಡು ಶರಣರು ''ಕೆರೆ ಹಳ್ಳ , ಬಾವಿ ಮೈದೆಗದರೆ ಗುಳ್ಳೆ ಗೊರಚೆ ಕಾಣಬಹುದು. ವಾರಿಧಿ ಮೈದೆಗದರೆ ರತ್ನಂಗಳು ಕಾಣಬಹುದು. ಕೂಡಲಸಂಗನ ಶರಣರು ಮನದೆರದು ಮಾತನಾಡಿದಡೆ ಲಿಂಗವ ಕಾಣಬಹುದು'' ಎಂದು ಬಸವರಾಜದೇವರು ಬಿತ್ತರಿಸಿದಂತೆ ಲಿಂಗವ ಕಾಣಬೇಕಾದರೆ ಕೂಡಲ ಸಂಗನ ಶರಣರು ಮನದೆರದು ಮಾತನಾಡಿದರೆ, ಲಿಂಗವ ಕಾಣಬಹುದು. ಎಂದಂತೆ ಇಲ್ಲಿ ಶಿವ ಶರಣೆಯಾದ ಸತ್ಯಕ್ಕ ತಾಯಿಯು, ತನ್ನ ಮನದೆರೆದು ಮಾತಾಡಿ ಎಲ್ಲರಿಗೂ ಅಭವನ ತೋರಿಸುತ್ತಿಹಳು. ಹೊರಗಿದ್ದಹನೆಂದು ಮರೆದು ಮಾತನಾಡಿದೆ ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು. ತೆರಹಿಲ್ಲದಭವ ನುಡಿಗೆಡೆಗೊಡನು ಎಂದು ಕರುಣಿಸಿದ ಕರುಣಾಮೃತ ಅದನೆಂತು ವರ್ಣಿಸುವದು.

ಲಿಂಗದೇವ ಹೊರಗಿದ್ದಾನೆಂದು ಮರೆದು ಸೌರಾಷ್ಟ್ರದಲ್ಲಿ ಸೋಮೇಶ್ವರನೆಂದು ಮಾತನಾಡಿದರು. ಶ್ರೀಶೈಲದಲ್ಲಿ ಮಲ್ಲಿಕಾರ್ಜುನನೆಂದು, ಉಜ್ಜಯನಿಯಲ್ಲಿ ಮಹಾಕಾಲೇಶ್ವರನೆಂದು,

ಓಂಕಾರದ ಅಮರೇಶ್ವರನೆಂದು. ಪರಳಿಯಲ್ಲಿ ವೈಜನಾಥನೆಂದು, ಢಾಕಿನಿಯಲ್ಲಿ ಭೀಮಶಂಕರನೆಂದು, ಸೇತುಬಂಧದಲ್ಲಿ ರಾಮೇಶ್ವರನೆಂದು ದಾರುಕದ ನಾಗೇಶ್ವರನೆಂದು, ವಾರಣಾಸಿಯಲ್ಲಿ ವಿಶ್ವೇಶ್ವರನೆಂದು, ಗೌತಮೀ ತಟದ (ನಾಸಿಕದ) ತ್ರಯಂಬಕೇಶ್ವರನೆಂದು, ಹಿಮಾಲಯದ ಕೇದಾರೇಶ್ವರನೆಂದು, ಶಿವಾಲಯದ ಘ್ರಣೇಶ್ವರನೆಂದು ಇದಲ್ಲದೆ ತೀರ್ಥಂಗಳಲ್ಲಿ ದೇವಾಲಯಗಳಲ್ಲಿ ಹೊರಗಿದ್ದಹನೆಂದು ಮರೆದು ಮಾತನಾಡಿದೆ. ಇದಲ್ಲದೆ ಲಿಂಗವಂತರು, ಪೂಜಾಲಿಂಗವು ದೇವನೆಂದು ನಾನು ಮರೆದು ಮಾತನಾಡಿದೆ. ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು ತೆರಹಿಲ್ಲದಭವ ನುಡಿಗೆಡೆಗೊಡನು ಎಂದು ಬಿತ್ತರಿಸಿದುದು ನೋಡಿದಡೆ ಶರಣ ಶರಣೆಯರು ಗುರು ರೂಪಾಗಿ ಬಂದು ಲಿಂಗದಿರುವ ಕರುಣಿಸಿದ ಸಂಜ್ಞೆಯ ಅರಿಯಿರೇ?

''ಅರುವ ಅರಿಯ ಹೇಳಿ ಸದ್ಗುರುನಾಥ ಕುರುಹ ಕೈಯಲ್ಲಿ ಕೊಟ್ಟನಲ್ಲದೆ ಅರುವನೆ ಮರೆದು ಕುರುಹನೆ ಪೂಜಿಸುವ ನರ ಕುರಿಗಳ ನೋಡಾ ಕೂಡಲ ಚೆನ್ನ ಸಂಗಮದೇವಾ''ಶರಣ ಶರಣೆಯರು ಸದ್ಗುರು ಸ್ವರೂಪ ಅರುವ ಅರಿಯ ಹೇಳಿದ ಕುರುಹ ಮಾಡದೆ ಅದು ಅರುವು ಎಂದು ಅರಿಯ ಹೋಗಿ ಇದು ಗುರುಕಾರುಣ್ಯದ ಅರಿವು, ತೆರಹಿಲ್ಲದ ಲಿಂಗ ಭರಿತವೆಂಬ ನಾಮ ಅರಿದರಿದು ನೋಡುವುದು ಬಿಟ್ಟು ಕುರುಹೆ ಲಿಂಗವೆಂದು ಪೂಜಿಸಿದಲ್ಲಿ ಇವರು ಹೊರಗಿದ್ದಿಹನೆಂದು ಮರೆದು ಮಾತನಾಡಿದವರು ಆಗಿಹರು ಎಂದು ತಿಳಿವುದು. ಇಲ್ಲಿ ಶರಣೆಯಾದ ಸತ್ಯಕ್ಕ ಅರಿಯಲೀಯದೆ ಎನ್ನ ಅಂತರಂಗದಲ್ಲಿಪ್ಪನು ತೆರಹಿಲ್ಲದಭವ ನುಡಿಗೆಡೆಗೊಡನು ಆತನ ಬಯಲಿಂಗೆ ಬೇಟೆಗೊಂಡೆನವ್ವಾ ಎಂದು ಅರಿದರಿದು ನೋಡಿ ಗುರು ಕಾರುಣ್ಯದ ಹಿರಿಮೆ ತನ್ನ ಅಂತರಂಗದಲ್ಲಿ ತಾನೆ ಅರಿತ ತನ್ನಿರುವು ಅದು. ತೆರಹಿಲ್ಲದಭವ ನುಡಿಗೆಡೆಗೊಡನು ಎಂದು ತಿಳುಹಿಸಿದಳು ಕರುಣಿಸಿದಳು.

ಹೊರಗಿನ ಬಾರಾ ಜ್ಯೋತಿರ್ಲಿಂಗದ ವಿಷಯ ತಿಳಿಯ ಹೇಳಿದವರಿಗೆ ಹೊರಗಿನ ದೇವನ ತಿಳುಹಿಸಿದರಲ್ಲದೆ ಸಕಲರ ಅಂತರಂಗದಲ್ಲಿರ್ದುದ ತಿಳಿಸಿದರೆ? ಲಿಂಗವಂತರುಗಳಲ್ಲಿ ಗುರು ರೂಪಾಗಿ ಬಂದು ಪೂಜಾಲಿಂಗವಕೊಟ್ಟು ಇದು ಇಷ್ಟಲಿಂಗವೆಂದು ಹೇಳಿ ಪೂಜಾ ವಿಧಾನವ ಹೇಳಿ ಈ ದೇವನ ದಿನ ನಿತ್ಯ ಪೂಜಿಸು ಎಂದು ಹೇಳಿದವರಾದರು.

ಇದನು ತಿಳಿಯಬೇಕೆಂದು ಅರುವಿನ ಇರುವು ಸಂಜ್ಞೆಯ ತಿಳಿಯ ಹೇಳಿದರೆ? ಇತ್ತ ಜ್ಞಾನಕಾಂಡಿಗಳು ಶೃತಿ ಪ್ರಮಾಣಗಳ ಬೋಧಿಸಿದರು. ಇವರು ಕೂಡಾ ಸತ್ಯ ಜ್ಞಾನಮಂಥನ ಬ್ರಹ್ಮ , ಅಯಮಾತ್ಮ ಬ್ರಹ್ಮ , ತತ್ವಮಸಿ, ಪ್ರಜ್ಞಾನಂ ಬ್ರಹ್ಮ , ಅಹಂ ಬ್ರಹ್ಮಾಸ್ಮಿ ಎಂದು ಉಪನಿಷತ್ತುಗಳಲ್ಲಿರುವ ಮಹಾ ವಾಕ್ಯವ ಹೇಳಿರುವರು ಇವರು ನುಡಿಗೊಳಪಡಿಸಿದುದನ್ನೆ ಬೋಧಿಸಿದರಲ್ಲದೆ ನುಡಿಗೆಡೆಗೊಡದ ಘನದಿರುವ ತಿಳಿಸಲಿಲ್ಲ, ಇಲ್ಲಿ ಸತ್ಯಕ್ಕನ ಹೃದಯದಿಂದ ಹೊರಬಂದ ಪ್ರಸಾದವಾಣಿಗೂ ಕುರುಹ ಶಬ್ದಗಳ ಕರಗಿಸಿ ಶಬ್ದದಿಂದಲೇ ಸಂಜ್ಞೆಯ ಕರುಣಿಸಿದವರು ಶರಣ ಶರಣೆಯರು.

ಅರುಹೃದಯರಾಗಿಹ ಮಹಾಂತರು, ನಿಶ್ಯಬ್ದವೇದಿಗಳು, ಶಬ್ದ ಸಂಭ್ರಮದವರು, ಶೃತಿವಂತರು, ಜ್ಞಾನ ಕಾಂಡಿಗಳದು ಶಬ್ದವೇದ. ನಿಶ್ಯಬ್ದವೇದವೆತ್ತ  ಶಬ್ದವೇದವೆತ್ತ ? ಬಿಳಿ ಮೋಡದಿಂದುಕ್ತವಾದ ಸೂರ್ಯನೆತ್ತ ? ಆವಾವ ಮೋಡಗಳಿಲ್ಲದ ಶುದ್ಧ ಆಕಾಶದಲ್ಲಿರುವ ಸೂರ್ಯನೆತ್ತ ? ಚಿದಹಮ್ಮಿನಿಂದುಕ್ತವಾದ ಬೋಧವೆತ್ತ? ಅಹಮಿಲ್ಲದ ಚಿದ್ಘನವ ಕಂಡು ಅಹಮಳಿದ

ಬೋಧವೆತ್ತ ? ಉಪಾಧಿಯಿಂದುಕ್ತವಾದ ಬೋಧವೆತ್ತ ? ನಿರುಪಾಧಿಯಾಗಿಹ ನಿಶ್ಯಬ್ಧ ಬ್ರಹ್ಮ ನಿಲುವುಳ್ಳ ಶಬ್ಧಮುಗ್ಧವಾಗಿಹ ಘನದಿರುವೆತ್ತ? ಮಾತಿನಿಂದ ಬಳಸಿದ ಬ್ರಹ್ಮವೆತ್ತ ? ಮಾತಿಲ್ಲದ ಶಬ್ಧಮುಗ್ದವಾಗಿಹ ಶರಣರ ಸಂಜ್ಞೆಯೆತ್ತ.?

ತೆರಹಿಲ್ಲದಭವ ನುಡಿಗೆಡೆಗೊಡನು, ಎಂಬ ಗುರು ಕಾರುಣ್ಯದ ಮಹದಿರುವ ನೋಡಿರೇ ? ''ಆದಿಯಲ್ಲಿ ಸಾಧ್ಯವೆಂಬೆನೆ ಅಲ್ಲಿಂದತ್ತತ್ತ, ಅನಾದಿಯಲ್ಲಿ ಸಾಧ್ಯವೆಂಬೆನೆ ಅಲ್ಲಿದಂತ್ತತ್ತ, ಸಾಧ್ಯ ಅಸಾಧ್ಯವೆಂಬ ಸೂತಕಶಬ್ದಕ್ಕತೀತ . ಆ ಲಿಂಗವೆ ಆಲಿಂಗವಾಗಿ, ಅವಿರಳ ಸಂಪನ್ನನಾದಲ್ಲಿ ಭೇದ ಭಾವವುಂಟೆಂಬೆನೆ ಅದೆ ಭವಕ್ಕೆ ಬೀಜ ಕೂಡಲಸಂಗಮದೇವಾ. ''

ಶರಣ ಶರಣೆಯರು ಕುರುಹ ಕರಗಿಸಿದವರು. ಕುರುಹು: ನಾಮರೂಪದಿಂದುಕ್ತವಾದ ಕುರುಹು ಸತ್ಯವೆಂದವರು ಉಂಟು. ಕುರುಹು ಮಿಥ್ಯೆವೆಂದವರು ಉಂಟು ಇದೆ ಮೇರೆಗೆ ಆವುದೆ ಶಬ್ದವಾಗಲಿ ಶೃತಿ ಪ್ರಮಾಣಗಳಿಂದುಕ್ತವಾದುದೆ. ಇರಲಿ ಈ ಶಬ್ದವ ಸತ್ಯವೆಂದವರುಂಟು ಇವು ಮಿಥ್ಯೆವೆಂದವರುಂಟು.

ಶರಣರು, ಕುರುಹು ಶಬ್ದ ಇವೆರಡು ಕರಗಿಸಿ ಮುಗ್ದರಾಗಿ ಮಾತಿಲ್ಲದವನ ಕಾಣಹೋದ ವರು. ತಮ್ಮ ಅಂತರಂಗದಲ್ಲಿರ್ದ ತನ್ನ ಇರುವ ಅರಿಯ ಹೋಗಿ ತೆರಹಿಲ್ಲದಭವ ನುಡಿಗೆಡೆಗೊಡ ನೆಂಬ ಸಂಜ್ಞೆ ಕರುಣಿಸಿದವರು. ಆರು ಅರಿಯಲಿಲ್ಲದ ಅರುವ ಅರಿಯ ಹೋಗಿಹರು. ಅವರು ಅರಿ ಸಿಕೊಳ್ಳುವ ಸಕಲ ನಾಮರೂಪವ ಅರಿಯದಂತಿದ್ದವರು. ಅರಿಯುವ ಜ್ಞಾನ ಕಾಂಡವ ಅರಿಯ ದಂತಿದ್ದವರು. ಅರಿಯಲಿಲ್ಲದ ಅರುವೆ ತಾನಾದುದರಿಂದ ತಾನು ಅವಕಾಶ ಕೊಡದವನು.

ಇತ್ತ ಕುರುಹಿನಿಂದುಕ್ತವಾದ ನಾಮರೂಪಂಗಳಿಗೂ ಅವಕಾಶ ಕೊಡದವನು. ಅರಿವ ದೃಕ್ ರೂಪ ಶಬ್ದ ಜ್ಞಾನಕ್ಕೂ ಅವಕಾಶ ಕೊಡದವನಾದುದರಿಂದ ತೆರಹಿಲ್ಲದಭವ ನುಡಿಗೆಡೆಗೊಡನು ಎಂದು ಸೂಚಿಸಿಹರು. ಆತನ ಬಯಲಿಂಗೆ ಬೇಟೆಗೊಂಡೆನವ್ವಾ ನಾನೇನ ಮಾಡುವೆ ನೆಲೆ ತಾಯೆ ಮರದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು ತನ್ನ ನರಿದಡೆ ಒಳ್ಳಿದನವ್ವಾ ನಮ್ಮ ಶಂಭು ಜಕ್ಕೇಶ್ವ ರನು.

ಆತನ ಬಯಲಿಂಗೆ ಬೇಟೆಗೊಂಡುದು ಏನೆಂಬೆನೇನೆಂಬೆ ತುದಿಮೊದಲಿಲ್ಲದ ಬಯಲು ಒಳಹೊರಗೆನ್ನಲು ಸಂದಿಲ್ಲದ ಬಯಲು. ತಾನೆ ಗುರುಲಿಂಗ, ತಾನೆ ಸ್ವಯಲಿಂಗ ತಾನೆ ಒಂದಾಗಿರ್ದ ಜಂಗಮ ಲಿಂಗ. ಇದು ನನ್ನ ಅಂತರಂಗದೊಳಗಿರ್ದ ಹೂಳಿಟ್ಟ ನಿಕ್ಷೇಪದಂತಿದ್ದ ಅಕ್ಷಯ ಸುಖ ಏನೆಂಬೆ. ಇಂತಪ ಗುಪ್ತ ಸುಖವ ನೆನೆದು ಮೋಹಗೊಂಡೆನವ್ವಾ ನಾನೆಂಬುದು ನಷ್ಟವಾಯಿತ್ತವ್ವಾ. ನೀನೆಂಬುದು ನಷ್ಟವಾಗಿ ನಿರುಪಮ ನಿಜವ ನೈಯ್ದು ನಿಶಬ್ದ ಬ್ರಹ್ಮ ಮುಚ್ಯತೆ ನನ್ನಿರುವಾಗಿರುವಲ್ಲಿ ನಾನೇನ ಮಾಡುವೆ ನೆಲೆ ತಾಯೆ.

ಮರದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು ಆ ಸುಖವ ಮರತಲ್ಲಿ ತಾನೆ ಸುಖದ ಸುಖವಾಗಿ ಎಚ್ಚರಿಸುವ ಕುರುಹಿಲ್ಲದ ಗಂಡನು ತನ್ನ ತೆರಹಿಲ್ಲದಭವ ನುಡಿಗೆಡೆಗೊಡನೆಂಬ ನಿಜದಿ ರುವ ಅರಿವುಡೆ ಒಳ್ಳಿದನವ್ವಾ ನಮ್ಮ ಶಂಭು ಜಕ್ಕೇಶ್ವರನು.

ಇತಿ ಸಮಾಪ್ತಿ

ಅಭಿವೃದ್ಧಿ ಎಂದರೆ ಕಲ್ಲು ಮಣ್ಣು ಕಟ್ಟಿಗೆ ಕಟ್ಟಡ ಕರೆನ್ಸಿ ಲೋಹಗಳಲ್ಲ. ತಾನು ಅಭಿವೃದ್ಧಿ ಹೊಂದುವುದು. ತನಗೆ ಅರಿವಾಗುವುದು. ತಾನು ತನ್ನಲ್ಲಿಯೇ ಸತ್ಯವನ್ನು ಕಂಡು ಕೊಳ್ಳುವುದು.

ಅದು ಕಲ್ಲು ಮಣ್ಣು ಹೊಡೆದು ಚಿನ್ನ ತೆಗೆದಷ್ಟೆ ಕಠಿಣ. ಸರಕಾರ, ವಿಶ್ವವಿದ್ಯಾಲಯಗಳು, ಸಮಾಜ, ಕುಟುಂಬ ವರ್ಗಗಳು ಸಾಧ್ಯವಾದರೆ ಈ ಕ್ರಿಯೆಯಲ್ಲಿ ತೊಡಗಬೇಕಷ್ಟೆ. ಇದಕ್ಕೂ ಮಿಗಿಲಾಗಿ ತಾನು ತನ್ನ ಕೆಲಸದಲ್ಲಿ ತೊಡಗಬೇಕಷ್ಟೆ.

ತನಗೆ ಅರಿವುಂಟಾಗುವುದು ಎಂದರೆ ಒಂದು ಧಾರ್ಮಿಕ ಕೆಲಸವಲ್ಲ. ಧರ್ಮ ಜಾತಿ ಮತ ಪಂಥ ಇಂದಿನ ಆಧುನಿಕ ಮಠ ಮಂದಿರಗಳಿಂದ ಅದು ದೊರೆಯುವುದೂ ಇಲ್ಲ. ಬದಲಾಗಿ ಅರಿವಿನ ಕ್ರಿಯೆ ಇನ್ನೂ ತನ್ನಿಂದ ಬಹು ದೂರ ಸಾಗುವುದು. ಅರಿವು ಶಾಲಾ ಕಾಲೇಜು ವಿಶ್ವವಿದ್ಯಾಲಯಗಳಿಂದ ದೊರೆಯವುದಿಲ್ಲ. ಪುಸ್ತಕಗಳಿಂದಲೂ ದೊರೆಯುವುದಿಲ್ಲ. ಆಧುನಿಕ ವಿಜ್ಞಾನ ಅರಿವಲ್ಲ, ಮಾಹಿತಿಯ ಒಂದು ಚಿಕ್ಕ ಕ್ರಿಯೆ ಮಾತ್ರ . ಅರಿವು ಬ್ರಹ್ಮಜ್ಞಾನ. ವಿಜ್ಞಾನ ಅರಿವಿನ ಬೈಪ್ರೊಡಕ್ಟ್. ಅದು ಭ್ರಮೆ ಜ್ಞಾನ. ಭ್ರಮಾಜ್ಞಾನಕ್ಕೆ ಮರುಳಾದದ್ದೇ ಹೆಚ್ಚು . ಇದನ್ನು ಯಾರೋ ಹೇಳಿದರೆ ತಿಳಿಯುತ್ತದೆ ಯೆಂದಲ್ಲ. ಅರಿವಾದರೆ ತನಗೆ ತಾನೇ ತಿಳಿಯುತ್ತದೆ, ತಾನು ಕಲಿತದ್ದೆಲ್ಲ ಭ್ರಮಾಜ್ಞಾನವೆಂದು ! ಆಗ ಕಲಿತದ್ದೆಲ್ಲ ಮರೆಯುತ್ತಾನೆ. ಪ್ಲಾಸ್ಟಿಕ್ ಹಾಳೆ ಮೇಲೆ ಬರೆದು ಬೇರ್ಪಡಿಸಿದರೆ ಬರೆದದ್ದೆಲ್ಲ ನಶಿಸಿಹೋಗುವಂತೆ ಅಷ್ಟು ತೀಕ್ಷ್ಣವಾಗಿ ಮರೆಯುವ ಕ್ರಿಯೆ ತನ್ನಲ್ಲಿ ನಡೆಯುತ್ತದೆ. ಇನ್ನು ಉಳಿದದ್ದು ಅರಿವು ಮಾತ್ರ. ಅದು ಸವಿದಷ್ಟೂ ಸಿಹಿ ; ಗಂಧದ ಕೊರಡು ಉಜ್ಜಿದಷ್ಟೂ ವಾಸನೆಯಿದ್ದಂತೆ.

ಇಂತಹ ಒಂದು ಸುಖಿ ಸರ್ವ ತನುಗಳಲ್ಲಿಯೂ ಇದೆ ; ಸರ್ವರಲ್ಲಿಯೂ ಇದೆ. ಅದು ದಕ್ಕಬೇಕೆಂಬುದೇ ಶ್ರೀ ವಿದ್ಯಾನಂದ ಶರಣರ ಆಶಯವಾಗಿತ್ತು.

ನಲವತ್ತೈದು ವರ್ಷಗಳ ಹಿಂದೆ ನಾಗಭೂಷಣರು ವಿದ್ಯಾನಂದ ಶರಣರನ್ನು ಕರೆದು ಅರಿವಿನ ದಾಸೋಹ ಕಾಯಕದಲ್ಲಿ 12 ವರ್ಷಗಳಾದರೂ ಸೇವೆ ಮಾಡಬೇಕು ಎಂದು ಕೇಳಿಕೊಂಡರು. ಶ್ರೀ ವಿದ್ಯಾನಂದ ಶರಣರು ಹಿಂದೆ ಮುಚಳಂಬದ ಶ್ರೀ ನೋಡಲಿಲ್ಲ. ನಾಲ್ಕು ದಶಕಗಳ ಪರ್ಯಂತ ಈ ನಾಡಿನಾದ್ಯಂತ ಏಕಾಂಗಿಯಾಗಿ ಮನೆಮನೆಗೆ ಸಂಚರಿಸಿದರು. ಆಶ್ರಮ ಮಠಗಳನ್ನು ಕಟ್ಟಲಿಲ್ಲ. ಘಟ ಕಟ್ಟಿದರು. ಅರುಹ್ಯಯದಕ್ಕೆ ಅರಿವಿನ ಸೂತ್ರ ಹೇಳಿಕೊಟ್ಟರು. ಅರಿವಿನಲ್ಲಿಯೇ ನಿಂತು ಸುಖಿಗಳಾಗುವ ಬಗೆ ವಿವರಿಸಿದರು.

ಸಾವಿರಾರು ಶಿಷ್ಯರನ್ನು ಮಾಡಿದರು. ಶಿಷ್ಯನ ಶಿಷ್ಯತ್ವ ಗುರುವಿನ ಗುರುತನ ಕೆಡಿಸಿ ಅರಿವಿನ ಆನಂದದಲ್ಲಿ ಉಳಿಯುವ ಬಗೆಯನ್ನು ಕೈ ಮುಟ್ಟಿ ತೋರಿಸಿದರು. ಅವರೆಲ್ಲ ಸಿದ್ಧರಾದರೆ ಈ ನಾಡಿನಲ್ಲಿ ಬೆಳಕೇ ಬೆಳಕು.

- ಬಸವರಾಜ ಸ್ವಾಮಿ